


# ಕನ್ನಡ ವಿಶ್ವವಿದ್ಯಾಲಯ
# ಹಂಪಿ

೨೦೧೩–೧೪ನೇ ಸಾಲಿನ ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸುತ್ತಿರುವ ಸಂಶೋಧನಾ ನಿಬಂಧ

# "ಅನುಪಮಾ ನಿರಂಜನರ ಕಥೆಗಳಲ್ಲಿ ಸ್ತ್ರೀ ಸಂವೇದನೆ"

ನಿಬಂಧಕಾರರು

**ಪ್ರೇಮ.ಪಿ**

ನೋಂದಣಿ ಸಂಖ್ಯೆ - KVTMKS - 00675
ಕನ್ನಡ ಎಂ.ಫಿಲ್ ವಿದ್ಯಾರ್ಥಿನಿ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ಕುವೆಂಪು ವಿದ್ಯಾವರ್ಧಕ ಟ್ರಸ್ಟ್, ಜಯಲಕ್ಷ್ಮೀಪುರಂ, ಮೈಸೂರು

ಮಾರ್ಗದರ್ಶಕರು

**ಡಾ. ಎನ್.ಮಹೇಶ್ವರಿ**

ಸಹ ಪ್ರಾಧ್ಯಾಪಕರು, ಕನ್ನಡ ವಿಭಾಗದ
ಜೆ.ಎಸ್.ಎಸ್. ಕಾಲೇಜು, ಚಾಮರಾಜನಗರ



**ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್**
**ಜಯಲಕ್ಷ್ಮೀಪುರಂ, ಮೈಸೂರು**

೨೦೧೩ – ೧೪

1131



# ಕನ್ನಡ ವಿಶ್ವವಿದ್ಯಾಲಯ
# ಹಂಪಿ

೨೦೧೩-೧೪ನೇ ಸಾಲಿನ ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸುತ್ತಿರುವ ಸಂಶೋಧನಾ ನಿಬಂಧ

# "ಅನುಪಮಾ ನಿರಂಜನರ ಕಥೆಗಳಲ್ಲಿ ಸ್ತ್ರೀ ಸಂವೇದನೆ"


ನಿಬಂಧಕಾರರು

**ಪ್ರೇಮ.ಪಿ**

ನೋಂದಣಿ ಸಂಖ್ಯೆ – KVTMKS - 00675
ಕನ್ನಡ ಎಂ.ಫಿಲ್ ವಿದ್ಯಾರ್ಥಿನಿ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ಕುವೆಂಪು ವಿದ್ಯಾವರ್ಧಕ ಟ್ರಸ್ಟ್, ಜಯಲಕ್ಷ್ಮೀಪುರಂ, ಮೈಸೂರು

ಮಾರ್ಗದರ್ಶಕರು

**ಡಾ. ಎನ್.ಮಹೇಶ್ವರಿ**

ಸಹ ಪ್ರಾಧ್ಯಾಪಕರು, ಕನ್ನಡ ವಿಭಾಗದ
ಜೆ.ಎಸ್.ಎಸ್. ಕಾಲೇಜು, ಚಾಮರಾಜನಗರ



**ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್**

**ಜಯಲಕ್ಷ್ಮೀಪುರಂ, ಮೈಸೂರು**

೨೦೧೩ – ೧೪

## ವಿದ್ಯಾರ್ಥಿಯ ಘೋಷಣಾ ಪತ್ರ

ಡಾ. ಎನ್.ಮಹೇಶ್ವರಿ, ಸಹ ಪ್ರಾಧ್ಯಾಪಕರು, ಕನ್ನಡ ವಿಭಾಗ, ಜೆ.ಎಸ್.ಎಸ್. ಕಾಲೇಜು, ಚಾಮರಾಜನಗರ ಇವರ ಮಾರ್ಗದರ್ಶನದಲ್ಲಿ "ಅನುಪಮಾ ನಿರಂಜನರ ಕಥೆಗಳಲ್ಲಿ ಸ್ತ್ರೀ ಸಂವೇದನೆ" ಎಂಬ ವಿಷಯದ ಬಗೆಗೆ ಸಂಶೋಧನೆ ನಡೆಸಿ ನಿಬಂಧವನ್ನು ಸಿದ್ಧಪಡಿಸಿದ್ದೇನೆ.

ಈ ನಿಬಂಧವನ್ನು ಈ ಹಿಂದೆ ಭಾಗಶಃವಾಗಲಿ, ಪೂರ್ಣವಾಗಿಯಾಗಲಿ ಈ ವಿಶ್ವವಿದ್ಯಾಲಯಕ್ಕೆ ಅಥವಾ ಬೇರೆ ಯಾವುದೇ ವಿಶ್ವವಿದ್ಯಾಲಯಗಳ ಪದವಿ, ಡಿಪ್ಲೊಮೊ ಅಥವಾ ಯಾವುದೇ ಪರೀಕ್ಷೆಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಮೈಸೂರು
ದಿನಾಂಕ: ೧೦-೦೭-೨೦೧೪

Prema P
(ಪ್ರೇಮ.ಪಿ)
೨೦೧೩-೧೪ನೇ ಸಾಲಿನ ಎಂ.ಫಿಲ್ ವಿದ್ಯಾರ್ಥಿ
ನೋಂದಣಿ ಸಂಖ್ಯೆ: KVTMKS - 00675
ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

## ಮಾರ್ಗದರ್ಶಕರ ಪ್ರಮಾಣಪತ್ರ

ಹಂಪಿ ಕನ್ನಡ ವಿಶ್ವವಿದ್ಯಾಲಯದ ಕನ್ನಡ ಎಂ.ಫಿಲ್ ಪದವಿಯ ವಿದ್ಯಾರ್ಥಿನಿಯಾದ **ಶ್ರೀಮತಿ ಪ್ರೇಮ.ಪಿ** ಅವರು ನನ್ನ ಮಾರ್ಗದರ್ಶನದಲ್ಲಿ **"ಅನುಪಮಾ ನಿರಂಜನರ ಕಥೆಗಳಲ್ಲಿ ಸ್ತ್ರೀ ಸಂವೇದನೆ"** ಎಂಬ ಶೀರ್ಷಿಕೆಯ ಸಂಶೋಧನಾ ನಿಬಂಧವನ್ನು ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಒಪ್ಪಿಸಲು ಸಿದ್ಧಪಡಿಸಿದ್ದಾರೆ.

ಈ ಸಂಶೋಧನಾ ನಿಬಂಧವನ್ನು ಈ ಹಿಂದೆ ಭಾಗಶಃವಾಗಲಿ, ಪೂರ್ಣವಾಗಿಯಾಗಲಿ ಈ ವಿಶ್ವವಿದ್ಯಾಲಯಕ್ಕೆ ಅಥವಾ ಬೇರೆ ಯಾವುದೇ ವಿಶ್ವವಿದ್ಯಾಲಯಗಳ ಪದವಿ, ಡಿಪ್ಲೊಮಾ ಅಥವಾ ಯಾವುದೇ ಪರೀಕ್ಷೆಗಾಗಿ ಯಾವ ವಿಶ್ವವಿದ್ಯಾಲಯಕ್ಕೂ ಸಲ್ಲಿಸಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಮೈಸೂರು
ದಿನಾಂಕ: ೧೦-೦೭-೨೦೧೪

**(ಡಾ. ಎನ್.ಮಹೇಶ್ವರಿ)**
ಮಾರ್ಗದರ್ಶಕರು
ಸಹ ಪ್ರಾಧ್ಯಾಪಕರು
ಕನ್ನಡ ವಿಭಾಗ, ಜೆ.ಎಸ್.ಎಸ್. ಕಾಲೇಜು
ಚಾಮರಾಜನಗರ

# "ಅನುಪಮಾ ನಿರಂಜನರ ಕಥೆಗಳಲ್ಲಿ ಸ್ತ್ರೀ ಸಂವೇದನೆ"

## ಪರಿವಿಡಿ



* * * * *

# ಅಧ್ಯಾಯ – ೧

# ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿ

ಸಾಹಿತ್ಯವು ನಿಂತ ನೀರಿನ ಮಡುವಿನಂತಲ್ಲ, ಅದು ಸದಾ ಸರಾಗವಾಗಿ ಹರಿಯುವ ಜೀವಸೆಲೆಯ ನದಿಯಿದ್ದಂತೆ, ಸಾಹಿತ್ಯದಲ್ಲಿ ಅನೇಕ ವಿಧಗಳು ಹುಟ್ಟಿಕೊಂಡಿವೆ. ಕಾದಂಬರಿ, ನಾಟಕ, ಕಥೆ, ವಿಮರ್ಶೆ ಮುಂತಾದ ಹೊಸ ಹೊಸ ರೂಪಗಳು ತಳೆದಂತೆ ಸಾಹಿತ್ಯದ ಸೊಬಗು ವಿಸ್ತೃತವಾಗುತ್ತಾ ಹೋಗುತ್ತದೆ. ಸಾಹಿತ್ಯ ಮನುಷ್ಯನ ಜೀವನವನ್ನು ಪ್ರತಿಬಿಂಬಿಸುವ ನಿಲುವುಗನ್ನಡಿಯಿದ್ದಂತೆ, ಆ ಕಾರಣಕ್ಕಾಗಿ ಅದನ್ನು ಡಾ. ಜಿ.ಎಸ್.ಶಿವರುದ್ರಪ್ಪ ಅವರು "ಮಾನವನ ಜೀವನದ ಪ್ರತಿಬಿಂಬವೂ ಹೌದು! ಗತಿಬಿಂಬವೂ ಹೌದು" ಎಂದಿದ್ದಾರೆ. ನಮ್ಮ ತಿಳುವಳಿಕೆಗೆ ಬಂದಿರುವಂತೆ ಮಾನವನ ಬದುಕಿನ ಪ್ರತಿಬಿಂಬವಾದ ಸಾಹಿತ್ಯದಲ್ಲಿಯೂ ಇಂತಹ ಸ್ಥಿತ್ಯಂತರಗಳು ನಿರಂತರವಾಗಿರುತ್ತವೆ.

ಕನ್ನಡ ಸಾಹಿತ್ಯ ಚರಿತ್ರೆಗೆ ಸುಮಾರು ೧೫೦೦ಕ್ಕೂ ಅಧಿಕ ವರ್ಷಗಳ ಇತಿಹಾಸವಿದೆ. ಅದರ ನಡುವೆಯೂ ಸಾಕಷ್ಟು ಏರಿಳಿತಗಳನ್ನು ಅದು ಕಂಡಿದೆ. ಇಷ್ಟು ದೀರ್ಘವಾದ ಕನ್ನಡ ಸಾಹಿತ್ಯ ಪರಂಪರೆಯನ್ನು ಕುರಿತ ಹಾಗೆ ಸಾಕಷ್ಟು ಪ್ರಮಾಣದಲ್ಲಿ ಅಧ್ಯಯನಗಳು, ಸಂಶೋಧನೆಗಳು ನಡೆದಿವೆ, ನಡೆಯುತ್ತಲೂ ಇವೆ, ಆದರೆ ಇಂಥ ಸಮೃದ್ಧ ಕನ್ನಡ ಸಾಹಿತ್ಯ ಚರಿತ್ರೆಯನ್ನು ಒಳಹೊಕ್ಕು ನೋಡಿದಾಗ ಮಹಿಳೆಯರ ಗೈರುಹಾಜರಿ ನಮಗೆ ಎದ್ದುಕಾಣುತ್ತದೆ. ಹನ್ನೆರಡನೆಯ ಶತಮಾನದ ವಚನ ಸಾಹಿತ್ಯ ಚಳುವಳಿಯ ಸಂದರ್ಭವನ್ನು ಬಿಟ್ಟರೆ ಮಹಿಳೆಯರ ಸಾಹಿತ್ಯವನ್ನು ಕಾಣಲು ನಾವು ಆಧುನಿಕ ಕಾಲಕ್ಕೆ ಬರಬೇಕಾಗುವುದು. ವಚನ ಚಳುವಳಿಯ ಸಂದರ್ಭದಲ್ಲಿ ಮಹಿಳೆಯರ ಸಾಹಿತ್ಯಾಭಿವ್ಯಕ್ತಿಗೆ ಪ್ರೋತ್ಸಾಹ ದೊರಕಿತು. ಹಾಗಾಗಿ ನಾವು ಮೊದಲ ಬಾರಿಗೆ ಮಹಿಳಾ ಧನಿಯನ್ನು ಗುರುತಿಸಲು ಸಾಧ್ಯವಾಗುವುದು ಅಕ್ಕಮಹಾದೇವಿಯ ವಚನಗಳಲ್ಲಿ. ಅಕ್ಕ ಅಲ್ಲಿ ಲೌಕಿಕ ಜಗತ್ತನ್ನು ನಿರಾಕರಿಸುತ್ತಲೇ ಅದನ್ನು ಎದುರಿಸುವ ನಿಟ್ಟಿನಲ್ಲಿ ಸಾಗುತ್ತಾಳೆ. ಗಂಡಿಗೆ ಹೆಣ್ಣು ಅಡ್ಡಿಯಾದಲ್ಲಿ ಹೆಣ್ಣಿಗೂ ಗಂಡು ಅಡ್ಡಿ ಎನ್ನುವ ಸ್ತ್ರೀಪರ ನಿಲುವನ್ನು ಹಾಗೆಯೇ ಲಿಂಗ, ಜಾತಿ, ವರ್ಗ, ಸಮಾನತೆಯ ನಿಲುವನ್ನು ಶಿವಶರಣೆಯರು ತಳೆದರು.

ನವೋದಯ ಕನ್ನಡ ಸಾಹಿತ್ಯ ಆರಂಭದಲ್ಲಿ ವಸಾಹತುಶಾಹಿ ಭಾರತದಲ್ಲಿ ಆಡಳಿತಾತ್ಮಕ ಪ್ರಕ್ರಿಯೆಗೆ ಸಹಾಯಕವಾಗಲೆನ್ನುವ ದೃಷ್ಟಿಯಿಂದ ಬ್ರಿಟಿಷರು ತೆರೆದ

ಶಿಕ್ಷಣದ ಅವಕಾಶವು ಪುರುಷರಲ್ಲಿ ಮಹಿಳೆಯ ದಯನೀಯ ಸ್ಥಿತಿಗತಿಯ ಬಗೆಗೆ ವಿಚಾರ ಮಾಡಲು ಪ್ರೇರೇಪಿಸಿತು. ಇದರ ಮುಂದಿನ ಹಂತದಲ್ಲಿ ಮಹಿಳೆಗೆ ದೊರೆತ ಶಿಕ್ಷಣವು ಅವಳು ತನ್ನ ಸ್ಥಿತಿಯನ್ನು ಅರಿಯಲು ದಾರಿ ಮಾಡಿಕೊಟ್ಟಿತು. ಜೊತೆಗೆ ದೇಶದ ಬಿಡುಗಡೆಯಾಗಿ ಮೊದಲ ಬಾರಿಗೆ ಮನೆಯಿಂದ ಹೊರ ಬಂದ ಮಹಿಳೆಯರು ನಿಧಾನವಾಗಿ ತಮ್ಮ ಅಸ್ತಿತ್ವವನ್ನು ಕಂಡುಕೊಳ್ಳುವ ದಿಸೆಯಲ್ಲಿ ಕ್ರಿಯಾಶೀರಾಗ ತೊಡಗಿದರು. ಇದರ ಮುಂದುವರಿಕೆಗಾಗಿ ಮಹಿಳೆ ವರ್ತಮಾನದಲ್ಲಿ ಅಸ್ತಿತ್ವವನ್ನು ಅನಾವರಣಗೊಳಿಸುತ್ತ ತನ್ನ ಬೇಕು-ಬೇಡಗಳನ್ನು ಸಾಹಿತ್ಯದ ಮೂಲಕ ಅಭಿವ್ಯಕ್ತಿಸುವ ಆಲೋಚನಾ ಕ್ರಮವನ್ನು ಬೆಳೆಸಿಕೊಳ್ಳುವ ನಿಟ್ಟಿನಲ್ಲಿ ಕಾರ್ಯಪ್ರವೃತ್ತಳಾದಳು. ಇದರಿಂದಾಗಿ ಆಧುನಿಕ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಮಹಿಳಾದನಿ ಕೇಳಲು ಸಾಧ್ಯವಾಯಿತು.

ಇಪ್ಪತ್ತನೆಯ ಶತಮಾನದ ಆರಂಭದಲ್ಲಿ ತಿರುಮಲಾಂಬ ಕಲ್ಯಾಣಮ್ಮ ಮುಂತಾದವರು ತಮ್ಮ ಸಾಹಿತ್ಯದಲ್ಲಿ ಮಹಿಳಾ ಸಂವೇದನೆಯನ್ನು ಮುಖ್ಯವಾಗಿಟ್ಟುಕೊಂಡು ಬರವಣಿಗೆ ಮಾಡಿದರು, ಬಾಲ್ಯವಿವಾಹ, ವರದಕ್ಷಿಣೆ, ವಿಧವೆಯರ ಸಂಕಷ್ಟ ದಾಂಪತ್ಯ ಬದುಕು ಮುಂತಾದವುಗಳನ್ನು ಕುರಿತು ಸಾಹಿತ್ಯದಲ್ಲಿ ಅನಾವರಣಗೊಳಿಸಿದರು. ಅಲ್ಲದೆ ಗಿರಿಬಾಲೆ, ಶ್ಯಾಮಲಾದೇವಿ, ಕೊಡಗಿನ ಗೌರಮ್ಮ, ಬೆಳಕೆರೆ ಜಾನಕಮ್ಮ, ಲೀಲಾಕಾಮತ್ ಮುಂತಾದವರು ಮಹಿಳಾ ಸಂವೇದನೆಯನ್ನು ಅರ್ಥೈಸಲು ಪ್ರಯತ್ನಿಸಿದ್ದಾರೆ. ನಂತರ ತ್ರಿವೇಣಿ, ಎಂ.ಕೆ.ಇಂದಿರಾ, ವೈದೇಹಿ, ಸಾ.ರಾ.ಅಬೂಬಕ್ಕರ್ ಮುಂತಾದವರು ತಮ್ಮ ಕಥೆ, ಕಾದಂಬರಿಗಳಲ್ಲಿ ಸ್ತ್ರೀ ಸಂವೇದನೆಯನ್ನು ಸಾಂದ್ರವಾಗಿ ತಂದಿದ್ದಾರೆ.

ನಮ್ಮಲ್ಲಿ ಮಹಿಳಾ ಸಂವೇದನೆಯನ್ನು ಮಹಿಳೆಯರೆ ಬರೆದ ಸಾಹಿತ್ಯದಲ್ಲಿ ಮಾತ್ರ ಗುರುತಿಸುವ, ಹುಡುಕುವ ಪ್ರಕ್ರಿಯೆ ಇತ್ತೀಚಿನ ದಿನಗಳಲ್ಲಿ ನಡೆಯುತ್ತಿದೆ. ಮಹಿಳಾ ಸಂವೇದನೆಯನ್ನು ಕುರಿತ ಅಧ್ಯಯನಗಳ ಬೆಳವಣಿಗೆ ಕನ್ನಡದ ಸಂದರ್ಭದಲ್ಲಿ ನಡೆದಿದ್ದರೂ ಸಾಕಷ್ಟು ಪ್ರಮಾಣದಲ್ಲಿ ವಿಸ್ತಾರವಾಗಿ ನಡೆದಿಲ್ಲ. ಇಂತಹ ಅಧ್ಯಯನಗಳು ಮಹಿಳಾ ಬದುಕಿನ ಸೂಕ್ಷ್ಮಗಳನ್ನು ಅವಳ ಅಸ್ತಿತ್ವವನ್ನು ಆಕೆಯ ಸಾಮಾಜಿಕ ವ್ಯಕ್ತಿತ್ವ ಬದುಕು ಬವಣೆಗಳನ್ನು ವಿವರಿಸುವ ನಿಟ್ಟಿನಲ್ಲಿ ಪ್ರಮುಖ ಸಲಕರಣೆಗಳಾಗಿವೆ.

'ಸ್ತ್ರೀ' ಸಂವೇದನೆ ಎನ್ನುವ ಮಾತು ಇತ್ತೀಚಿನದಾದರೂ ಸಂವೇದನೆ ಇತ್ತೀಚಿನದಲ್ಲ, ಅದರ ಸ್ವರೂಪ ಕಾಲದಿಂದ ಕಾಲಕ್ಕೆ ವಿಧವಿಧದ ರೀತಿಯದಾಗಿರಬಹುದು, ಸಂಪ್ರದಾಯಬದ್ಧ ಸಾಮಾಜಿಕ ರಚನೆಯಲ್ಲಿ ಜಾತಿ, ವರ್ಗ,

ವರ್ಣಗಳ ಅಸಮಾನತೆಯಂತೆ ಲಿಂಗ ಸಂಬಂಧಿ ಅಸಮಾನತೆಯೂ ಇದೆ, ಪುರುಷ ಕೇಂದ್ರಿತ ಸಮಾಜದಲ್ಲಿ ಹೆಣ್ಣನ್ನು ಸಾಮಾಜಿಕ, ರಾಜಕೀಯ, ಆರ್ಥಿಕ, ಧಾರ್ಮಿಕ, ಕ್ಷೇತ್ರಗಳಲ್ಲಿ ಕಡೆಗಣಿಸಲಾಗಿದೆ. ಪುರುಷಪ್ರಧಾನ ಸಮಾಜದಲ್ಲಿ ಸ್ತ್ರೀ ಪುರುಷನ ನೆರಳಿನಲ್ಲಿ ಅವನನ್ನು ಅನುಸರಿಸುತ್ತಾ ಬಂದಿದ್ದಾಳೆ. ಅವಳನ್ನು ದೇಶದ ದ್ವಿತೀಯ ದರ್ಜೆಯ ಪ್ರಜೆ ಎಂದು ಪರಿಗಣಿಸಲಾಗಿದೆ. ಆದರೆ ಇಂದಿನ ವೈಚಾರಿಕ ಸಂದರ್ಭದಲ್ಲಿ ಮಹಿಳೆಯರ ಸ್ಥಾನಮಾನಗಳಲ್ಲಿ ಸ್ವಲ್ಪಮಟ್ಟಿಗೆ ಬದಲಾವಣೆ ಕಾಣುತ್ತಿದ್ದೇವೆ.

ಇಂಗ್ಲಿಷ್‌ನ 'ಸೆನ್ಸಿಬಿಲಿಟಿ' ಎಂಬ ಪದ ಕನ್ನಡ ಸಾಹಿತ್ಯ ಸಂದರ್ಭದಲ್ಲಿ 'ಸಂವೇದನೆ' ಎಂಬ ರೂಪದಲ್ಲಿ ಬಳಕೆಯಾಗುತ್ತಾ ಬರುತ್ತಿದೆ. "ಯಾವುದೇ ಅನುಭವಕ್ಕೆ ವ್ಯಕ್ತಿಯೊಬ್ಬನ ವಿಶಿಷ್ಟವಾದ ಭಾವನಾತ್ಮಕ ಮತ್ತು ಬೌದ್ಧಿಕ ಪ್ರತಿಕ್ರಿಯೆ" ಎಂಬ ಅರ್ಥದಲ್ಲಿ ಅದೊಂದು ತಾತ್ವಿಕ ಪರಿಭಾಷೆಯಾಗಿ ಹೊಸ ಹೊಸ ರೂಪ ಪಡೆದುಕೊಂಡು ಸ್ತ್ರೀಸಂವೇದನೆ, ದಲಿತ ಸಂವೇದನೆ, ಮುಸ್ಲಿಂ ಸಂವೇದನೆ ಎನ್ನುವ ಸೈದ್ಧಾಂತಿಕ ನೆಲೆಗಳಲ್ಲಿ ಬಳಕೆಯಲ್ಲಿದೆ.

ನ್ಯಾಯಪರತೆಯನ್ನು ಎತ್ತಿಹಿಡಿದು ಸಮಾನತೆಯನ್ನು ಬಿತ್ತಿ ಉತ್ತಮ ಸಮಾಜವನ್ನು ಕಟ್ಟುವಲ್ಲಿ ಚಳುವಳಿ ಪ್ರಮುಖ ಪಾತ್ರವಹಿಸುತ್ತದೆ. ಮಹಿಳಾ ಚಳುವಳಿಯ ಮೊದಲ ಅಲೆ ಉಗಮವಾದದ್ದು ಪಾಶ್ಚಾತ್ಯರಲ್ಲಿ, ಅದು ಅಮೇರಿಕಾದಲ್ಲಿ ೧೯ನೆಯ ಶತಮಾನದ ಮಧ್ಯಭಾಗದಲ್ಲಿ. ಇದಕ್ಕೆ ಮೂಲ ಆ ಸಮಯದಲ್ಲಿ ಹುಟ್ಟಿಕೊಂಡ ಸಮಾನತೆ ಹಾಗೂ ಸ್ವಾತಂತ್ರ್ಯದ ತತ್ವಗಳು, ಈ ತತ್ವಗಳನ್ನು ಮಹಿಳೆಯರಿಗೂ ಅನ್ವಯಿಸಿಕೊಂಡು ಸ್ತ್ರೀವಾದಿ ಚಿಂತನೆಗಳು ಹುಟ್ಟಿಕೊಂಡವು. ಕನ್ನಡ ಸಾಹಿತ್ಯದ ಸಂದರ್ಭದಲ್ಲಿ ೬೦ರ ದಶಕದ ಆರಂಭದಲ್ಲಿ ಸ್ತ್ರೀವಾದಿ ಚಳುವಳಿ ಆರಂಭಗೊಂಡಿತು. ಪಾಶ್ಚಾತ್ಯ ಮೇರಿ ವುಲ್ಫ್‌ಸ್ಟನ್ ಕ್ರಾಫ್ಟ್, ವರ್ಜೀನಿಯಾವುಲ್ಫ್, ಸಿಮೋನ್‌ದ ಬೋವಾ, ಕೇಟ್‌ಮಿಲೆಟ್ ಇತ್ಯಾದಿ ಚಿಂತಕಿಯರ ಚಿಂತನೆಗಳ ಪ್ರೇರಣೆ ಪ್ರಭಾವಗಳನ್ನು ಸ್ತ್ರೀಪರ ಕಾಳಜಿಯುಳ್ಳ ಅಧ್ಯಯನಗಳು ಕನ್ನಡದಲ್ಲಿ ನಡೆದವು ಹಾಗೂ ನಡೆಯುತ್ತಿವೆ. ಕನ್ನಡ ಸಾಹಿತ್ಯದ ಸಂದರ್ಭದಲ್ಲಿ ಸ್ತ್ರೀ ಸಂವೇದನೆಗಳನ್ನು ಗುರುತಿಸುವ ನಿಟ್ಟಿನಲ್ಲಿ ಹಲವು ಅಧ್ಯಯನಗಳು ಸೈದ್ಧಾಂತಿಕವಾಗಿ ನಡೆಯುತ್ತಿವೆ.

ಮಹಿಳೆಯರ ಬದುಕು, ಬವಣೆ, ಇಷ್ಟ ಕಷ್ಟಗಳು ಅವರ ಅಸ್ತಿತ್ವವನ್ನು ಕುರಿತ ಹಾಗೆ ತಮ್ಮ ಸಾಹಿತ್ಯ ಕೃತಿಗಳಲ್ಲಿ ಹಲವಾರು ಲೇಖಕರು ಅಭಿವ್ಯಕ್ತಿಸಿರುವಂತೆ ಸಾಕಷ್ಟು ಪ್ರಮಾಣದ ಲೇಖಕಿಯರೂ ಕೂಡ ಚಿತ್ರಿಸಿರುವುದನ್ನು ನಾವು ಕಾಣಬಹುದು. ಕನ್ನಡದ

ಹಲವಾರು ಲೇಖಕಿಯರು ಈ ತರಹದ ಸಂವೇದನೆಗಳಿಗೆ ತಮ್ಮ ವಿವಿಧ ಸಾಹಿತ್ಯ ಪ್ರಕಾರಗಳಲ್ಲಿ ಅಭಿವ್ಯಕ್ತಿ ನೀಡಿದ್ದಾರೆ. ಈ ನಿಟ್ಟಿನಲ್ಲಿ ಕನ್ನಡದ ಬಹುಮುಖ್ಯ ಲೇಖಕಿಯರಾದ ಡಾ. ಅನುಪಮಾ ನಿರಂಜನ ಅವರು ಪ್ರಮುಖರೆನಿಸುತ್ತಾರೆ. ಇವರ ಕಥೆಗಳಲ್ಲಿ ಸ್ತ್ರೀ ಸಂವೇದನೆಯು ಒಂದು ಪ್ರಬಲ ಲಕ್ಷಣವಾಗಿ ಕಂಡುಬರುತ್ತದೆ.

ಡಾ. ಅನುಪಮಾ ನಿರಂಜನ ಅವರು ಎರಡನೇ ತಲೆಮಾರಿನ ಪ್ರಮುಖ ಲೇಖಕಿ ವೃತ್ತಿಯಿಂದ ವೈದ್ಯೆಯಾದುದರಿಂದ ಸಾಮಾಜಿಕ ಕಳಕಳಿಯೊಂದಿಗೆ, ಸಾಮಾಜಿಕ ಆರೋಗ್ಯದ ಕಡೆ ಗಮನಹರಿಸುತ್ತಾರೆ. ವಿಮರ್ಶಕರ ಅವಜ್ಞೆಗೆ ತುತ್ತಾಗಿದ್ದರೂ ಅವರ 'ಘೋಷ' ಮತ್ತು 'ಮಾಧವಿ' ಕನ್ನಡ ಕಾದಂಬರಿ ಕ್ಷೇತ್ರದಲ್ಲಿ ಹೊಸ ಆಯಾಮವನ್ನು ಸೃಷ್ಟಿಸಿದ ಕೃತಿಗಳಲ್ಲಿ, ಆತ್ಮವೃತ್ತ, 'ನೆನಪು ಸಿಹಿಕಹಿ', ಬರಹಗಾರ್ತಿಯ ಬದುಕು ಅವರ ವಿಶಿಷ್ಟ ಆತ್ಮಕಥನಗಳು, ಅವರ ವಿಜ್ಞಾನ ಸಾಹಿತ್ಯ ಕನ್ನಡಕ್ಕೆ ಅಮೂಲ್ಯ ಕೊಡುಗೆಯಾಗಿದೆ.

೧೯೫೨ರಲ್ಲಿ ಪ್ರಕಟವಾದ 'ಕಣ್ಮಣಿ' ಇವರ ಮೊದಲ ಕಥಾಸಂಕಲನ, ಮೊದಲ ಕಾದಂಬರಿ 'ಅನಂತಗೀತ' ೧೯೫೮ರಲ್ಲಿ ಪ್ರಕಟಗೊಂಡಿದೆ. ಕೃತಿ ಪ್ರಕಟಗೊಂಡ ಕಾಲಕ್ಕೆ ಕನ್ನಡ ಸಾಹಿತ್ಯದಲ್ಲಿ ಪ್ರಗತಿಶೀಲ ಚಳುವಳಿ ತನ್ನ ಕಾವು ಕಳೆದುಕೊಂಡು ನವ್ಯ ಸಂವೇದನೆಗಳು ಕಾಣಿಸಿಕೊಂಡಿತ್ತು. ಭಾರತೀಯ ಬದುಕಿನಲ್ಲಿ ಸ್ವಾತಂತ್ರ್ಯ ಚಳುವಳಿಯ ಉದ್ದೇಶಗಳು ಈಡೇರಿ ದೇಶಕ್ಕೆ ಸ್ವಾತಂತ್ರ್ಯ ಲಭ್ಯವಾಗಿತ್ತು. ಅವರ ಕಾದಂಬರಿಯಲ್ಲಿ ಯಾವ ಸಾಹಿತ್ಯ ಚಳುವಳಿಯ ಪ್ರಭಾವವೂ ಇಲ್ಲ. ಆದರೆ ಅವರ ಕೃತಿಗಳಲ್ಲಿ ದಟ್ಟ ವೈಚಾರಿಕತೆಯಿದೆ. ಸಾಮಾಜಿಕ ಪ್ರಜ್ಞೆಯಿದೆ, ಬಂಡಾಯದ ಸೊಲ್ಲಿದೆ. ಅನುಪಮಾ ಅವರಿಗೆ ಮಹಿಳೆಯರ ಬಗ್ಗೆ ಅಪಾರ ಕಳಕಳಿ ಇದೆ. ಅವರಿಗೆ ತಿಳುವಳಿಕೆ ನೀಡಬೇಕು. ಅವರಲ್ಲಿ ಜಾಗೃತಿ ಉಂಟು ಮಾಡಬೇಕು. ಮಹಿಳಾ ಬದುಕಿನ ಸ್ವರೂಪ, ಪಿತೃಪ್ರಧಾನ ವ್ಯವಸ್ಥೆಯಲ್ಲಿ ಹೊಸ ಅರ್ಥ ಪಡೆಯಬೇಕೆಂಬ ಹಿನ್ನೆಲೆಯಲ್ಲಿ ಶುಭಕಾಮನೆ, ಮಾನಿನಿ, ನಾರೀಲೋಕ ಮೊದಲಾದ ಕೃತಿಗಳನ್ನು ರಚಿಸಿದರು. ಇದರೊಂದಿಗೆ ಮಹಿಳೆಯರ ಆರೋಗ್ಯ, ಹೊಸದಾಗಿ ಸಾಂಸಾರಿಕ ಜೀವನ ಪ್ರವೇಶಿಸುತ್ತಿರುವ ಹೊಸ ವಧುವಿಗೆ ಕಿವಿಮಾತು, ದಾಂಪತ್ಯ ದೀಪಿಕೆ, ಸ್ತ್ರೀ ಸ್ವಾಸ್ಥ್ಯಸಂಹಿತೆ, ಕಿಶೋರಾವಸ್ಥೆಗೆ ಪ್ರವೇಶಿಸುತ್ತಿರುವ ಹದಿಹರೆಯದ ಹೆಣ್ಣಿಗೆಂದೇ ಕೇಳುಕಿಶೋರಿ, ಹೀಗೆ ಅನುಪಮಾ ಹೆಣ್ಣಿನ ಬಗೆಗೆ ಸಾಹಿತ್ಯದಾಚೆಗೆ ಸ್ಪಂದಿಸಿದ ಸ್ತ್ರೀವಾದಿ.

ಅನುಪಮಾ ಅವರ ಪ್ರತಿಭೆಗೆ ಸಾಕಷ್ಟು ಪ್ರಶಸ್ತಿಗಳು ಲಭಿಸಿವೆ. 'ರೂವಾರಿಯ ಲಕ್ಷ್ಮಿ' ಕಥಾಸಂಕಲನಕ್ಕೆ ರಾಜ್ಯ ಪ್ರಶಸ್ತಿ ೧೯೭೮ರಲ್ಲಿ ಸೋವಿಯತ್ ಲ್ಯಾಂಡ್ ನೆಹರೂ

ಪ್ರಶಸ್ತಿ ಆತ್ಮಕಥನ, 'ನೆನಪು ಸಿಹಿಕಹಿ'ಗೆ ಸಾಕಷ್ಟು ಪ್ರಶಸ್ತಿಗಳು ಲಭಿಸಿವೆ. 'ರೂವಾರಿಯ ಲಕ್ಷ್ಮಿ' ಕಥಾಸಂಕಲನಕ್ಕೆ ರಾಜ್ಯಪ್ರಶಸ್ತಿ, ೧೯೭೭ರಲ್ಲಿ ನಂಜನಗೂಡು ತಿರುಮಲಾಂಬ ಪ್ರಶಸ್ತಿ ಇದಲ್ಲದೆ ೧೯೭೭ರಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಗೌರವ, ಮಾನ ಸನ್ಮಾನಗಳು ದೊರೆತಿವೆ. ಅವರ 'ಋಣ' ಕಾದಂಬರಿ ಚಲನಚಿತ್ರವಾಗಿ ಜನಪ್ರಿಯಗಳಿಸಿದೆ. ಬದುಕಿಗೆ ಬದ್ಧರಾದ, ಜನಪದ ನಿಲುವಿನ, ಖಚಿತ ಸಿದ್ಧಾಂತ ಮತ್ತು ಧೋರಣೆಗಳ ಕೆಲವರೇ ಕನ್ನಡ ಸಾಹಿತಿಗಳಲ್ಲಿ ಅನುಪಮಾ ಒಬ್ಬರು. 'ಸಾಹಿತ್ಯಕ್ಕಾಗಿ ಸಾಹಿತ್ಯ' ಎಂದು ತಿಳಿಯದೆ "ಸಾಹಿತ್ಯ ಪ್ರತ್ಯಕ್ಷವಾಗಿ ಅಲ್ಲದಿದ್ದರೂ ಪರೋಕ್ಷವಾಗಿ ಬದಲಾವಣೆಗಳಿಗೆ ನೆರವಾಗಬೇಕು" ಎಂದು ನಂಬಿದವರು, ನಡೆನುಡಿಗಳಲ್ಲಿ ಏಕತೆಯನ್ನು ತೋರಿಸಿಕೊಟ್ಟವರು. ಸಾಹಿತ್ಯದ 'ದಂತಗೋಪುರ'ದಲ್ಲಿ ಉಳಿಯದೆ ಜನಪದ ಹೋರಾಟಗಳಲ್ಲಿ ಸ್ವತಃ ಭಾಗವಹಿಸಿದ ಸಾಹಿತಿ ಡಾ. ಅನುಪಮಾ, ಸ್ನೇಹಜೀವಿ, ಪ್ರೋತ್ಸಾಹಕಿ, ಬದುಕಿಗಾಗಿ ಹೋರಾಡಿದ ವೀರವನಿತೆ, ಅವರ ಜೀವನವೇ ಒಂದು ವೀರಗಾಥೆ, ಡಾ. ಅನುಪಮಾ ನಿರಂಜನರ ಸಾಹಿತ್ಯ ಎಷ್ಟು ಅಭ್ಯಾಸಯೋಗ್ಯವೋ ಅವರ ಬದುಕು ಕೂಡ ಅಷ್ಟೆ ಅಭ್ಯಾಸಯೋಗ್ಯವಾಗಿದೆ. ಅನುಪಮಾ ಅವರ ಕಥೆಗಳಲ್ಲಿ ಅವರ ಜೀವನದ ಇತಿವೃತ್ತ, ವೃತ್ತಿ ಬದುಕು ಎಂಬ ಅಧ್ಯಾಯದಲ್ಲಿ ಅನುಪಮಾ ಅವರ ಜೀವನ ಹುಟ್ಟು ಬೆಳವಣಿಗೆ, ಅವರು ಬದುಕಿಬಂದ ದಾರಿ, ಅವರ ವೃತ್ತಿ ಜೀವನ ಅದರ ಜೊತೆಗೆ ಲೇಖಕಿಯರಾಗಿ ಅವರು ನೀಡಿದ ಕೊಡುಗೆಯ ಬಗ್ಗೆ ಚರ್ಚಿಸಲು ಉದ್ದೇಶಿಸಲಾಗಿದೆ.

ಅನುಪಮಾ ಅವರ ಸಾಮಾಜಿಕ ಪ್ರಜ್ಞೆ ಎಂಬ ಅಧ್ಯಾಯದಲ್ಲಿ ಅವರು ತಳೆದ ನಿಲುವುಗಳ ಬಗ್ಗೆ ಯಾವ ಅಭಿಪ್ರಾಯವನ್ನು ತಳೆದಿದ್ದಾರೆ ಎಂಬುದನ್ನು ಚರ್ಚಿಸಲಾಗಿದೆ.

ಅನುಪಮಾ ಅವರ ಸಾಹಿತ್ಯಕ ಒಟ್ಟು ಸಾಧನೆ ಎಂಬ ಅಧ್ಯಾಯದಲ್ಲಿ ಅವರು ತಳೆದ ನಿಲುವುಗಳ ಬಗ್ಗೆ ಯಾವ ಅಭಿಪ್ರಾಯವನ್ನು ತಳೆದಿದ್ದಾರೆ ಎಂಬುದನ್ನು ಚರ್ಚಿಸಲಾಗಿದೆ.

ಅನುಪಮಾ ಅವರ ಕಥೆಗಳಲ್ಲಿ ವೈದ್ಯಕೀಯ ಬದುಕು ಎಂಬ ಅಧ್ಯಾಯದಲ್ಲಿ ವೈದ್ಯರಾಗಿ ಅವರ ಬದುಕು ಹೇಗಿತ್ತು ಎಂಬುದನ್ನು ಚರ್ಚಿಸಲಾಗಿದೆ.

ಸ್ತ್ರೀಸಂವೇದನೆಯ ಅರ್ಥವ್ಯಾಪ್ತಿ ಮತ್ತು ಕನ್ನಡ ಸಾಹಿತ್ಯದಲ್ಲಿ ಸ್ತ್ರೀಸಂವೇದನೆ, ಬೆಳೆದು ಬಂದಿರುವುದನ್ನು ಚರ್ಚಿಸಲಾಗಿದೆ ಹಾಗೂ ಸ್ತ್ರೀ ಸಂವೇದನೆಯ

ಅರ್ಥವ್ಯಾಪ್ತಿಯನ್ನು ವಿವರಿಸುವುದರ ಮೂಲಕ ಕನ್ನಡ ಸಾಹಿತ್ಯದ ವಿವಿಧ ಕಾಲಘಟ್ಟಗಳಲ್ಲಿ ಸ್ತ್ರೀಸಂವೇದನೆ ಯಾವ ನೆಲೆಗಳಲ್ಲಿ ಅಭಿವ್ಯಕ್ತವಾಗಿದೆ. ಅವುಗಳಿಗೆ ಸ್ತ್ರೀ ನಿಲುವು ಹೇಗೆ ಭಿನ್ನ ಎಂಬುದನ್ನು ಚರ್ಚಿಸಲಾಗಿದೆ.

ಸಾಹಿತ್ಯಕವಾಗಿ ಏನೇನು ಬಳಸಿಕೊಂಡಿದ್ದಾರೆ. ವಿವಿಧ ಸ್ತ್ರೀಪರ ಚಿಂತಕಿಯರ ವಿಚಾರಗಳನ್ನು ವ್ಯಾಖ್ಯಾನಗಳನ್ನು ವಿಶ್ಲೇಷಿಸಲು ಉದ್ದೇಶಿಸಲಾಗಿದೆ.

ಪ್ರಸ್ತುತ ಅಧ್ಯಯನಕ್ಕೆ 'ಅನುಪಮಾ ಅವರ ಕಥೆಗಳಲ್ಲಿ ಸ್ತ್ರೀ ಸಂವೇದನೆ'. ಎಂಬ ವಿಷಯವನ್ನು ಆಯ್ಕೆಮಾಡಿಕೊಳ್ಳಲು ನನಗೆ ಮೇಲಿನ ಸಂಗತಿಯೇ ಕಾರಣವಾಗಿದೆ. ಆದ್ದರಿಂದ ಅನುಪಮಾ ಅವರ ಕಥೆಗಳ ಚೌಕಟ್ಟಿನಲ್ಲಿ ಅಭಿವ್ಯಕ್ತವಾಗಿರುವ ಹೆಣ್ಣಿನ ಅನುಭವ ಲೋಕವನ್ನು ಗುರುತಿಸಿ, ಚರ್ಚಿಸಿ ವಿಶ್ಲೇಷಿಸುವ ವಸ್ತು ವಿಷಯವನ್ನು ಈ ಅಧ್ಯಯನಕ್ಕೆ ಆಯ್ಕೆಮಾಡಿಕೊಂಡಿರುತ್ತೇನೆ. ಈ ಅಧ್ಯಯನದಲ್ಲಿ ಅನುಪಮಾ ಅವರ ಕಥೆಗಳಲ್ಲಿ ಅಭಿವ್ಯಕ್ತವಾಗಿರುವ ಹೆಣ್ಣಿನ ಅನುಭವ ಲೋಕವನ್ನು ದರ್ಶಿಸುವುದೇ ಮುಖ್ಯ ಉದ್ದೇಶವಾಗಿದೆ.

ಜಿ.ಎಸ್.ಸಿದ್ಧಲಿಂಗಯ್ಯ, ಸಾಲು ದೀಪಗಳು, ಎಂ.ಎಸ್. ಕೃಷ್ಣಯ್ಯ(ಸಂ.), ೨೦೦೧, ಪು. ೫೦೩.

# ಅಧ್ಯಾಯ – ೨

## 'ಅನುಪಮಾ' ನಿರಂಜನ ಅವರ ಇತಿವೃತ್ತ, ವೃತ್ತಿ – ಪ್ರವೃತ್ತಿ

'ಅನುಪಮಾ' ಎಂಬ ಕಾವ್ಯನಾಮದಿಂದಲೇ ಇಂದು ಗುರುತಿಸಲ್ಪಡುವ ವೆಂಕಟಲಕ್ಷ್ಮಮ್ಮ ಕನ್ನಡ ಸಾಹಿತ್ಯದಲ್ಲಿನ ಬಹುಮುಖ್ಯ ಲೇಖಕಿ, ಇವರ ತಂದೆ ಶಿವರಾಮಯ್ಯ, ತಾಯಿ ಲಕ್ಷ್ಮೀ, ತಂದೆಯ ಹಿರಿಯ ಮಗಳಾದ ಇವರಿಗೆ ಅಜ್ಜಿ ಮತ್ತು ತಾಯಿಯ ಹೆಸರುಗಳೆರಡನ್ನೂ ಸೇರಿಸಿ ವೆಂಕಟಲಕ್ಷ್ಮೀ ಎಂದು ನಾಮಕರಣ ಮಾಡಿದರು. ವೆಂಕಟಲಕ್ಷ್ಮೀ ಚಿಕ್ಕವಯಸ್ಸಿನಿಂದಲೇ ಪದ್ಯ, ಸಣ್ಣ ಕಥೆಗಳನ್ನು ಬರೆಯುತ್ತಿದ್ದರು. ಕುತೂಹಲದ ಸಂಗತಿಯೆಂದರೆ ಇವರ ತಂದೆ ಶಿವರಾಮಯ್ಯನವರು ನೇಕಾರ ವೃತ್ತಿಯನ್ನು ಅವಲಂಬಿಸದೆ ವಿದ್ಯಾಕ್ಷೇತ್ರಕ್ಕೆ ಇಳಿದದ್ದು ಬಿ.ಎ. ಬಿ.ಟಿ. ಪರೀಕ್ಷೆ ಮುಗಿಸಿ ಅವರು ಸ್ಕೂಲ್ ಇನ್ಸ್‌ಪೆಕ್ಟರ್ ಆಗಿ ಕೆಲಸ ಮಾಡುತತಿದ್ದರು. ಆದ್ದರಿಂದ ಇವರ ಬಾಲ್ಯವೆಲ್ಲಾ ಒಂದು ಊರಿನಿಂದ ಮತ್ತೊಂದು ಊರಿಗೆ ಓಡಾಡುವುದರಲ್ಲೇ ಕಳೆಯಿತು. ಆದುದರಿಂದ ವೆಂಕಟಲಕ್ಷ್ಮೀಯವರು ೧೯೩೪ರಲ್ಲಿ ತೀರ್ಥಹಳ್ಳಿಯಲ್ಲಿ ಹುಟ್ಟಲು ಇದೇ ಕಾರಣ, ಇವರ ತಂದೆ ವಿದ್ಯಾಪಕ್ಷಪಾತಿ ಅವರು ಯಾವಾಗಲೂ ಮಕ್ಕಳಿಗೆ ಹೇಳುತ್ತಿದ್ದುದು "ಚೆನ್ನಾಗಿ ಓದಿ ದೊಡ್ಡ ಪರೀಕ್ಷೆಯನ್ನು ಪಾಸು ಮಾಡಿರಿ ಮನುಷ್ಯನಿಗೆ ದುಡ್ಡಿಗಿಂತ ವಿದ್ಯೆಯೇ ಮುಖ್ಯ" ಎನ್ನುತ್ತಿದ್ದರು.

ವೆಂಕಟಲಕ್ಷ್ಮೀ ಅವರ ಮನೆಯಲ್ಲಿ ಇದ್ದಂತಹ ಬಲು ಪ್ರೀತಿಯ ವ್ಯಕ್ತಿ ಚಿಕ್ಕಮ್ಮ. ಇವರು ಶಿವರಾಮಯ್ಯನವರ ತಂಗಿ. ಇವರು ಸದೃಢಕಾಯದ ಹೆಂಗಸು, ಶ್ವೇತ ವರ್ಣದ ಮೈಬಣ್ಣ ಅಗಲವಾದ ಮುಖದಲ್ಲಿ ಮಂದಹಾಸವಿತ್ತು, ಆತ್ಮವಿಶ್ವಾಸವಿತ್ತು, ಇವರು ವೃತ್ತಿಯಲ್ಲಿ ಶಿಕ್ಷಕಿಯಾಗಿದ್ದರು. ಇವರು ವೆಂಕೂಗೆ ಊರಿಂದ ಬರುವಾಗ ಏನೋ ಒಂದು ವಸ್ತು ತಂದಿದ್ದೇನೆ ಎಂದು ಹೇಳಿದಾಗ ಅದನ್ನು ಕೇಳಿದ ವೆಂಕಟಲಕ್ಷ್ಮೀಯು ಉತ್ಸಾಹದಿಂದ ಅದು ಏನಿರಬಹುದು ಎಂದು ಉತ್ಸಾಹದಿಂದ ದಾರಿಯಲ್ಲಿಯೇ ಆ ಪೆಟ್ಟಿಗೆಯನ್ನು ಬಿಡಿಸಿ ನೋಡಬೇಕೆಂಬ ಕಾತರ ಇವರಿಗೆ ಉಂಟಾಗುತ್ತದೆ. ಆದರೆ ಅಕ್ಕಮ್ಮ ಮನೆಗೆ ಹೋದಮೇಲೆಯೇ ಆ ಪೆಟ್ಟಿಗೆಯನ್ನು ಬಿಚ್ಚಬೇಕು ಎಂದು ಹೇಳುತ್ತಾರೆ. ಮನೆಗೆ ಬಂದಾಕ್ಷಣ ಅಕ್ಕಮ್ಮ ಪೆಟ್ಟಿಗೆ ಬಿಡಿಸಿ ಅದರೊಳಗಿರುವ ಹಾರ್ಮೋನಿಯಂ ಎತ್ತಿ ವೆಂಕಿಗೆ ತೋರಿಸಿದಾಗ ವೆಂಕೂಗೆ ಮಾಯಾಜಗತ್ತಿಗೆ ಕಾಲಿರಿಸಿದ ಹಾಗಾಗುತ್ತದೆ. ಅಕ್ಕಮ್ಮರವರು ವೆಂಕೂಗೆ ಚೆನ್ನಾಗಿ ಹಾರ್ಮೋನಿಯಂ ಕಲೀಬೇಕು ಎಂದಾಗ ವೆಂಕೂ ಹೆಮ್ಮೆಯಿಂದ ತನ್ನ ತಮ್ಮಂದಿರತ್ತಾ

ನೋಡುತ್ತಾ ತಲೆಯಾಡಿಸುತ್ತಾರೆ. ಅಷ್ಟುಹೊತ್ತಿಗೆ ಅವರಿಗೆ ಹಾರ್ಮೋನಿಯಂ ಅಭ್ಯಾಸ ಆರಂಭವಾಗುತ್ತದೆ. ಇವರಿಗೆ ಪಾಠ ಹೇಳುವುದಕ್ಕೆ ಒಬ್ಬ ಶಿಕ್ಷಕರನ್ನು ನಿಯೋಜಿಸುತ್ತಾರೆ. ಸರಿಗಮಪದನಿಸ ಬಾರಿಸಲು ಬಂದ ದಿನ ಅವರನ್ನು ಹಿಡಿಯುವವರೆ ಇಲ್ಲ, ಇದನ್ನು ಕೇಳಲು ವೆಂಕಟಲಕ್ಷ್ಮೀಯವರ ಮನೆ ಮಂದಿಯೆಲ್ಲಾ ರೂಮಿನಲ್ಲಿ ಬಂದು ಕೂರುತ್ತಿದ್ದರು.

ಹಾರ್ಮೋನಿಯಂ ಬಾರಿಸುವುದರೊಂದಿಗೆ ಹಾಡುವಿಕೆಯೂ ಇರುತ್ತಿತ್ತು, ವೆಂಕಟಲಕ್ಷ್ಮೀಯವರ ಶಾರೀರ ಚೆನ್ನಾಗಿದೆಯೆಂದು ಯಾವ ರೀತಿಯಲ್ಲಿ ಬೇಕಾದರೂ ಬಳಸಿಕೊಳ್ಳಬಹುದು ಅವರ ಶಿಕ್ಷಕರು ಹೇಳುತ್ತಾರೆ. ಸಂಗೀತದಲ್ಲಿ ಅವರಿಗೆ ವಿಶೇಷವಾದ ಶ್ರದ್ಧೆ ಇಲ್ಲದಿದ್ದರೂ ಅಕ್ಕಮ್ಮ ಹೇಳಿದ್ದಾರೆ. ಚೆನ್ನಾಗಿ ಕಲಿಯಬೇಕೆಂಬ ಆಸೆ ಅವರಿಗೆ ಇತ್ತು, ಇದೇ ರೀತಿ ತಿಂಗಳು, ವರ್ಷ ಕಳೆದವು, ವರ್ಣಗಳು, ಗೀತೆಗಳು, ಅನಂತರ ಕೀರ್ತನೆಗಳು ಇವನ್ನೆಲ್ಲಾ ಅವರು ಹಾಡುವ ಮಟ್ಟಕ್ಕೆ ಬರುತ್ತಾರೆ. ಈ ಸಂದರ್ಭದಲ್ಲಿ ಒಂದು ಘಟನೆ ನಡೆಯುತ್ತದೆ. ಆ ಸಂದರ್ಭದಲ್ಲಿ ಅವರ ಪ್ರೈಮರಿ ಮೂರನೆಯ ತರಗತಿಯಲ್ಲಿ ಓದುತ್ತಾರೆ. ಆಗ ಮೈಸೂರು ಸಂಸ್ಥಾನದ ದಿವಾನರಾಗಿದ್ದ ಸರ್ ಮಿರ್ಜಾ ಇಸ್ಮಾಯಿಲ್ ಅವರು ಮಾಗಡಿಗೆ ಯಾವುದೋ ಕಾರ್ಯಕ್ರಮದ ನಿಮಿತ್ತ ಬಂದಿದ್ದರು, ಆ ಸಮಯದಲ್ಲಿ "ದಿವಾನರ ಮುಂದೆ ಇವರು ಹಾಡಬೇಕು" ಎಂದು ಶಾಲೆಯಲ್ಲಿ ಇವರ ಮುಖ್ಯ ಶಿಕ್ಷಕರು ಹೇಳುತ್ತಾರೆ. ಇದನ್ನು ಕೇಳಿದ ವೆಂಕಟಲಕ್ಷ್ಮೀಯವರು ಮನೆಗೆ ಬಂದು ವಿಷಯ ತಿಳಿಸುತ್ತಾರೆ. ಮನೆಯಲ್ಲಿ ಎಲ್ಲರಿಗೂ ಸಂತೋಷವು ತುಂಬಿ ತುಳುಕುವಂತಾಗುತ್ತದೆ. ಆದರೆ ಸ್ವಲ್ಪ ದಿನ ಇವರು ವಿಶೇಷ ಪಾಠದ ಅಭ್ಯಾಸಕ್ಕೆ ಹೋಗುತ್ತಾರೆ.

ಕಾರ್ಯಕ್ರಮದ ದಿನ ಪುಟ್ಟ ಹುಡುಗಿಯಾದ ವೆಂಕಟಲಕ್ಷ್ಮೀಯವರ ಹಾಡನ್ನು ಕೇಳಿದ ದಿವಾನರು ತುಂಬಾ ಸಂತೋಷಪಟ್ಟು ಅವರು ತಮ್ಮ ಕೊರಳಿನ್ನಲ್ಲಿದ್ದ ದೊಡ್ಡ ಗಾತ್ರದ ಹೂವಿನ ಹಾರವನ್ನು ವೆಂಕಟಲಕ್ಷ್ಮೀ ಅವರ ಕೊರಳಿಗೆ ಹಾಕುತ್ತಾರೆ. ಆದರೆ ಇವರ ಸಂಗೀತ ವಿದ್ಯಾಭ್ಯಾಸ ಮುಂದುವರಿಯಲಿಲ್ಲ. ಯಾಕೆಂದರೆ ಇವರು ಮಾಗಡಿ ಬಿಟ್ಟು ತುಮಕೂರಿಗೆ ಹೋಗಬೇಕಾಯಿತು. ಯಾಕೆಂದರೆ ಒಂದು ಊರಿನಿಂದ ಮತ್ತೊಂದು ಊರಿಗೆ ಇವರ ತಂದೆಗೆ ವರ್ಗಾವಣೆಯಾಗುತ್ತಿದ್ದರಿಂದ ಅಲ್ಲಿ ಪಾಠ ಹೇಳಿಸುವ ಶಕ್ತಿ ಸಾಮರ್ಥ್ಯ ಇಲ್ಲದಿದ್ದರಿಂದ ವೆಂಕಟಲಕ್ಷ್ಮೀಯವರ ಸಂಗೀತಕ್ಕೆ ಮಂಗಳ ಹಾಡಿತು.

ಬೇಸಿಗೆಯ ರಜೆಯ ಸಂದರ್ಭದಲ್ಲಿ ಇವರು ತಾತನ ಊರಿಗೆ ಹೋಗುತ್ತಾರೆ. ತಾತನ ಜೊತೆ ಊರು ಸುತ್ತುವ ಆಸೆ ಇವರಿಗೂ ಇತ್ತು. ಮಾರಮ್ಮನ ಗುಡಿಯ ಮುಂದಿದ್ದ ಅರಳಿಕಟ್ಟೆಯ ಮೇಲೆ ತಾತ ಹರಟೆ ಕೊಚ್ಚುವುದು, ಅಲ್ಲಿ ಅವರು ಹೇಳುತ್ತಿದ್ದ ಕಥೆಗಳು ವಎಂಕಲಕ್ಷ್ಮೀ ಅವರಿಗೆ ಸಂತೋಷವನ್ನು ಊಂಟುಮಾಡುತ್ತಿದ್ದವು. ಅವರು ಈ ಹಳ್ಳಿಯಲ್ಲಿದ್ದಾಗ ಇಡೀ ರಾತ್ರಿಯೆಲ್ಲಾ ಎದ್ದಿದ್ದು ಒಂದು ಬಯಲಾಟವನ್ನು ನೋಡಿದ್ದ ನೆನಪು, ಈ ಹಳ್ಳಿಯ ನೆನಪುಗಳಲ್ಲಿ ಹಲವು 'ಅವು ನೂಲು ನೇಯ್ದ ಚಿತ್ರ' ಮತ್ತು 'ಎಳೆ' ಕಾದಂಬರಿಗಳಲ್ಲಿ ಸ್ಪಷ್ಟವಾಗಿ ಮೂಡಿಬಂದಿದೆ.

ಒಂದು ದಿನ ವೆಂಕಟಲಕ್ಷ್ಮೀಯವರ ತಾತನ ಮನೆಯಲ್ಲಿ ವಿಚಿತ್ರ ರುಚಿಯ ಸಾಂಬಾರನ್ನು ಅಜ್ಜಿ ಬಡಿಸುತ್ತಾರೆ. ತಾತ ಅವರ ಎದುರಿಗೆ ಕುಳಿತು ರಾಗಿ ಮುದ್ದೆಯೊಮದಿಗೆ ಸಾರು ಮತ್ತು ಹೋಳುಗಳನ್ನು ನಾಲಿಗೆ ಚಪ್ಪರಿಸುವಂತೆ ತಿನ್ನುತ್ತಿರುತ್ತಾರೆ. ಇವರನ್ನು ನೋಡಿ ತಾತ? "ತಿನ್ನಿ ಒಳ್ಳೇ ನರಪೇತಳಗಳ ಅಂಗೆ ಇದ್ದೀರಿ'. ನಿಮ್ಮ ತಂದೆಯ ಹಾಗೆ, ಮೈಗೆ ಒಳ್ಳೆಯ ತಾಕತ್ತು ಬರುತ್ತೇ ಈ ಸಾರು ತಿಂದ್ರೆ" ಎನ್ನುತ್ತಾರೆ. ಅಂಥದನ್ನು ಇವರು ಅದುವರೆವಿಗೂ ನೋಡಿಯೇ ಇರಲಿಲ್ಲ, "ಇದೇನು ಸಾರು" ಎಂದು ಕೇಳುತ್ತಾರೆ. ತಾತ ನಗುತ್ತಾ "ಅದು ಸ್ಪೆಷಲ್ ಬದನೇಕಾಯಿ" ಎಂದು ಹೇಳುತ್ತಾರೆ. ಅದನ್ನು ಇವರು ತಿಂದಾಗ ತುಂಬಾ ರುಚಿಯಾಗಿತ್ತು, ಆದರೆ ಅನಂತರ ಇವರಿಗೆ ಗೊತ್ತಾಗುತ್ತದೆ ಅದು ಕೋಳಿ ಮಾಂಸದ ಸಾಂಬಾರು ಎಂದು, ತಾತನ ಮನೆಯವರು ಮಾಂಸಾಹಾರಿಗಳು, ಇವರ ತಂದೆಯ ಮನೆಯವರು ಸಸ್ಯಹಾರಿಗಳು, ಪರಿಸ್ಥಿತಿ ಹೀಗಿದ್ದುದರಿಂದ ಇವರ ತಾಯಿ ಎಲ್ಲಾ ಮಕ್ಕಳನ್ನು ಗುಟ್ಟಾಗಿ ಕರೆದು ಹೇಳುತ್ತಾರೆ. "ಇದನ್ನು ತಿಂದೇವು ಎಂದು ನಿಮ್ಮ ಅಪ್ಪನಿಗೆ ತಿಳಿಸಬಾರದು ಎಂದಾಗ ಇವರೆಲ್ಲಾ ಸರಿ ಅಮ್ಮ ಎಂದು ಮಾತು ಕೊಡುತ್ತಾರೆ, ಇವರ ತಂದೆಗೆ ಈ ವಿಷಯವನ್ನಾ ಎಂದು ಹೇಳುವುದೇ ಇಲ್ಲ, ಅಪರೂಪಕ್ಕೊಮ್ಮೆ ತಾಯಿಯ ಮನೆಯವರು ಬಂದಾಗ ತಾಯಿ ಈ ರೀತಿಯ ಅಡುಗೆ ಮಾಡುವುದಿತ್ತು, ಇದೆಲ್ಲಾ ಇವರ ತಂದೆ ಆಫೀಸಿಗೆ ಹೋದ ಮೇಲೆ ನಡೆಯುತ್ತಿತ್ತು. ಇನ್ನೊಂದು ಆಶ್ಚರ್ಯದ ಸಂಗತಿ ಎಂದರೆ ಮನೆಯ ಕಡೆಯವರೆಲ್ಲಾ ಜಾತಿಯ ಕಸುಬನ್ನು ಬಿಟ್ಟು ವಿದ್ಯಾಕ್ಷೇತ್ರಕ್ಕೆ ಇಳಿದದ್ದು. ಹಾಗೆಯೇ ಇವರ ತಾತಾರವರು ಆದ ಕೊಂಗಾಡಿಯಪ್ಪ ಇವರ ಊರು ದೊಡ್ಡ ಬಳ್ಳಾಪುರ. ಆಗಿನ ಕಾಲದಲ್ಲಿ ಯಾರೇ ಬಂದರೂ ಇವರ ಮನೆಗೆ ಬಾರದೇ ಹೋಗುತ್ತಿರಲಿಲ್ಲ. ಯಾವ ಮುಖ್ಯವ್ಯಕ್ತಿಗಳು ಊರಿಗೆ ಬಂದರೂ "ನಮ್ಮ ಮನೆಗೆ ದಯಮಾಡಿಸಬೇಕು" ಎಂದು ಇವರ ತಾತಾ ಕೇಳಿಕೊಳ್ಳುತ್ತಿದ್ದರು.

ಅಲ್ಲಿ ಹಾಲು ಹಣ್ಣುಗಳ ಸತ್ಕಾರ ನಡೆಯುತ್ತಿತ್ತು. ಹೀಗೆ ಬಂದವರಲ್ಲಿ ಕನ್ನಡದ ಶ್ರೇಷ್ಠ ಸಾಹಿತಿಗಳಾದ ವಿ.ಸೀ. ಎಂ.ಆರ್.ಶ್ರೀ, ಬಿ.ಎಂ.ಶ್ರೀ, ಕುವೆಂಪು ಮುಂತಾದವರಿದ್ದರು. ಕುವೆಂಪು ಅವರು ಕೊಂಗಾಡಿಯಪ್ಪನವರ ಮನೆ ಸಗಣಿ ಗಂಜಲಗಳ ನಾತದಿಂದ ಕೂಡಿತ್ತು ಎಂದು ಅವರ 'ನೆನಪಿನ ದೋಣಿ'ಯಲ್ಲಿ ಬರೆದಿದ್ದಾರೆ. ಅಂದರೆ ವೆಂಕಟಲಕ್ಷ್ಮೀ ಅವರ ನೆನಪಿನಲ್ಲಿ ಕೊಂಗಾಡಿಯಪ್ಪನವರ ಮನೆ ಸ್ವಚ್ಛತೆಗೆ ಹೆಸರಾಗಿತ್ತು. ಪ್ರತಿ ಶನಿವಾರ ಮತ್ತು ಹಬ್ಬಹರಿದಿನಗಳಲ್ಲಿ ಮನೆಯೆಲ್ಲಾ ಸಗಣಿ ಹಾಕಿ ತಾರಿಸುತ್ತಿದ್ದರು. ಪ್ರಾಯಶಃ ಇಂಥ ಸಮಯದಲ್ಲಿ ಕುವೆಂಪು ಆ ಮನೆಗೆ ಭೇಟಿ ನೀಡುತ್ತಿದ್ದರು ಎಂದು ತಿಳಿಯಬಹುದಾಗಿದೆ.

ಹಳ್ಳಿಗಳಲ್ಲೇ ಓಡಾಡಿಕೊಂಡು ಹಳ್ಳಿ ಗಮಾರರಂತಿದ್ದ ವೆಂಕಲಕ್ಷ್ಮೀಯವರು ಬೆಂಗಳೂರು ಪಟ್ಟಣಕ್ಕೆ ಬಂದಾಗ ಅವರಿಗೆ ವಿಸ್ಮಯ ಕಾದಿರುತ್ತದೆ ಎಂದರೆ ತಪ್ಪಾಗುವುದಿಲ್ಲ. ಇದು ಸಾಮಾನ್ಯ ಜನರಿಗೂ ಉಂಟಾಗುವ ಸಂಗತಿಯಾಗಿದೆ. ಹಾಗೆಯೇ ಅಲ್ಲಿನ ಜನರು, ವಾಹನಗಳು, ವೈಭವಗಳು ಕಣ್ಣುಕುಕ್ಕಿಸುವಂತಿದ್ದವು. ವೆಂಕಟಲಕ್ಷ್ಮೀ ಅವರು ಬೆಂಗಳೂರಿಗೆ ಬಂದಾಗ ಇರುತ್ತಿದ್ದುದು ಇನ್ನೊಬ್ಬ ತಾತನವರಾದ ಡಾಕ್ಟರ್ ಡಿ.ಎಸ್.ಪುಟ್ಟಣ್ಣನವರ ಮನೆಯಲ್ಲಿ ಇವರು ಕೊಂಗಾಡಿಯಪ್ಪನವರ ತಮ್ಮಂದಿರು, ಆದರೆ ಇವರ ತಾತನವರು ದರ್ಪ, ಅಟ್ಟಹಾಸಗಳಲ್ಲಿ, ಗತ್ತಿನ್ನಲ್ಲಿ, ಇವರು ಬೇರೆಯೇ ಬಗೆಯ ವ್ಯಕ್ತಿತ್ವ ಪಡೆದಿದ್ದರು. ಪುಟ್ಟಣ್ಣನವರು ಬಿ.ಎ. ಮುಗಿಯುವವರೆಗೂ ಮದ್ರಾಸಿನಲ್ಲಿದ್ದು ಅನಂತರ ಯಾರೋ ಪುಣ್ಯಾತ್ಮರ ಸಹಕಾರದಿಂದ ಇಂಗ್ಲೆಂಡಿಗೆ ಹೋಗಿ ಅಲ್ಲಿ ಎಫ್.ಆರ್.ಸಿ.ಎಸ್. ಪದವಿ ಪಡೆದು ಬಂದಿದ್ದರು.

ಇವರ ಮನೆ ಬಸವನ ಗುಡಿಯ ವಾಣಿವಿಲಾಸ ಸರ್ಕಲಿನಲ್ಲಿ ಇತ್ತು, ಆ ಸಂದರ್ಭದಲ್ಲಿ ಇವರ ಕಣ್ಣಿಗೆ ಆ ಮನೆ ಅರಮನೆಯಂತೆಯೆ ಕಾಣುತ್ತದೆ. ಅಷ್ಟು ದೊಡ್ಡದಾದ ಮನೆ ಅದು. ಎಲ್ಲಿ ಹೋದರೆ ಎಲ್ಲಿ ದಾರಿ ತಪ್ಪುವುದೋ ಎಂಬ ಭಯ ಉಂಟಾಗುವಂತೆ ಭಾಷಾವಾಗುತ್ತದೆ. ಮುಂದಿನ ಹಜಾರದಲ್ಲಿ ರೇಡಿಯೋ ಇಟ್ಟಿದ್ದರು ಪೆಟ್ಟಿಗೆಯೊಳಗಿಂದ ಜನ ಮಾತಾಡುವುದನ್ನು ಕೇಳಿ ಇವರಿಗೆ ಆಶ್ಚರ್ಯ ಉಂಟಾಗುತ್ತದೆ. "ಅದೇನು?" ಎಂದು ತಮ್ಮ ತಂದೆಯನ್ನು ವೆಂಕಟಲಕ್ಷ್ಮೀ ಕೇಳಿದಾಗ "ಅದು ರೇಡಿಯೋ ಮುಟ್ಟಬೇಡ" ಎಂದು ಅವರು ಹೇಳುತ್ತಾರೆ. ರೇಡಿಯೋ ಎಂದರೆ ಒಂದು ಭಯದ ವಸ್ತು ಎಂದು ಆ ವಯಸ್ಸಿನಲ್ಲಿ ನಂಬಬೇಕಾಗುತ್ತದೆ. ಅನಂತರ ಅವರು ಅದರಿಂದ ದೂರವಾಗಿಯೇ ಇರುತ್ತಾರೆ. ಅದೇ ರೀತಿ ಪ್ರಥಮ ಬಾರಿಗೆ ಆ ಮನೆಗೆ ಅವರು ಬಂದಾಗ ಹಜಾರದ ಸುತ್ತಲೂ ಸೋಫಾಗಳು ಇದ್ದು, ಮಧ್ಯದ ಭಾಗದಲ್ಲಿ ಒಂದು

ಹುಲಿಯ ತಲೆಯಿರುತ್ತದೆ. ಅದನ್ನು ಕಂಡ ವೆಂಕಟಲಕ್ಷ್ಮೀ ಅವರ ತಮ್ಮ ರಾಮು ಭಯದಿಂದ "ಹುಲಿ ಬಂತು ಹುಲಿ" ಎಂದು ಚೀರಿಕೊಂಡಾಗ ಅವರ ಪಕ್ಕದಲ್ಲೇ ಇದ್ದ ವೆಂಕಟಲಕ್ಷ್ಮೀ ಅವರ ಜಂಘಾಬಲವೇ ಉಡುಗಿದಂತೆ ಆಗುತ್ತದೆ. ಇದನ್ನು ತಿಳಿದಾಕ್ಷಣ ಬಿದ್ದೆವೋ ಎದ್ದೆವೋ ಎಂದು ಅಲ್ಲಿಂದ ಓಡಿ ಹೋಗುತ್ತಾರೆ. ಅವರ ಸ್ಥಿತಿ ಕಂಡು ಇವರ ಚಿಕ್ಕಪ್ಪಂದಿರು "ಅದು ಬದುಕಿರೋ ಹುಲಿಯಲ್ಲ, ಸತ್ತಿರುವ ಹುಲಿಯ ಚರ್ಮವನ್ನು ತಂದು ಅಲ್ಲಿಟ್ಟಿದ್ದೇನೆ ಅಷ್ಟೇ, ಹೆದರಿಕೊಳ್ಳಬೇಡಿ"[೧] ಎನ್ನುತ್ತಾರೆ. ಅವರು ಹುಲಿಯ ತಲೆಯನ್ನು ಇವರ ಕೈಯಿಂದಲ್ಲೇ ಮುಟ್ಟಿ ತೋರಿಸಿದರು. ಹುಲಿಯ ಭಯ ಮಾತ್ರ ಹೋಗುವುದೇ ಇಲ್ಲ. ಹಜಾರದಲ್ಲಿ ಒಂದು ಕಡೆ ರೇಡಿಯೋ ಭೂತವಿದ್ದರೆ, ಇನ್ನೊಂದು ಕಡೆ ಹುಲಿರಾಯ, ಇವರು ಆ ಮನೆಯಲ್ಲಿ ಇರುವವರೆವಿಗೆ ಆ ಕೋನೆಯ ಕಡೆ ಹೋಗುತ್ತಲ್ಲೇ ಇರಲಿಲ್ಲ.

ವೆಂಕಟಲಕ್ಷ್ಮೀ ಅವರಿಗೆ ಆ ಮನೆಯಲ್ಲಿ ಸ್ನಾನ ಮಾಡುವುದು ಎಂದರೆ ದೊಡ್ಡ ಖುಷಿಯೇ ಆಗುತ್ತಿತ್ತು. ಯಾಕೆಂದರೆ ಒಂದು ಕಡೆ ನಲ್ಲಿ ತಿರುಗಿಸಿದರೆ ಬಿಸಿ ನೀರೂ, ಇನ್ನೊಂದು ಕಡೆ ತಿರುಗಿಸಿದರೆ ತಣ್ಣೀರೂ ಬರುತ್ತಿದ್ದವು. ಟಾಯ್ಲೆಟ್ ರೂಂ ಕೂಡಾ ಬಿಳಿಯ ಟೈಲ್ಸ್ ಹೊದ್ದುಕೊಂಡು ಫಳಫಳ ಗುಟ್ಟುತ್ತಿದ್ದವು. ಹಳ್ಳಿಗಳಲ್ಲಿ ತಿಪ್ಪೆಗಳನ್ನು ಮಾತ್ರ ಕಂಡಿದ್ದ ಇವರಿಗೆ ಈ ಬಗೆಯ ಕಕ್ಕಸ್ಸು ರೂಂಗಳನ್ನು ಕಂಡು ಎಲ್ಲಿಲ್ಲದ ಸಂತೋಷ, ಆಶ್ಚರ್ಯ, ಟಾಯ್ಲೆಟ್ ರೂಂಗಳ ಬಾಗಿಲು ಹಾಕಿಕೊಂಡರೆ ತೆಗೆಯಲು ಬರುತ್ತಿರಲಿಲ್ಲ. ಹಿಡಿ ತಿರುಗಿಸಿದರೆ ಬರುತ್ತದೆ ಎಂಬುದೂ ತಿಳಿಯದಷ್ಟು ಮುಗ್ಧರು ಇವರು ಹಾಗಿದ್ದರು. ಒಟ್ಟಿನ್ನಲ್ಲಿ ಬೆಂಗಳೂರಿನ ಈ ತಾತಪ್ಪನವರ ಮನೆ ಇವರಿಗೆ ಇಂದ್ರಲೋಕದ ಒಂದು ವೈಭವವಾಗಿ ಕಾಣುತ್ತಿತ್ತು.

ವೆಂಕಟಲಕ್ಷ್ಮೀ ಅವರಿಗೆ ಸುಮಾರು ಹತ್ತು ಹನ್ನೊಂದು ವರ್ಷಗಳಿರಬಹುದು. ಆಗ ಇವರ ತಂದೆಗೆ ಮಾಗಡಿಯಿಂದ ತುಮಕೂರಿಗೆ ವರ್ಗವಾಯಿತು. ಮಹಾಯುದ್ಧ ನಡೆಯುತ್ತಿದ್ದ ಕಾಲವದು. ಬೆಳಿಗ್ಗೆ ಎದ್ದು ಪೇಪರ್ ಓದುತ್ತಿದ್ದ ಇವರ ತಂದೆ ಇವತ್ತು ಆದೇಶದ ಮೇಲೆ ಬಾಂಬು ಹಾಕಿದರು, ಹಾಗೇ ಇವತ್ತು ಈ ದೇಶದ ಮೇಲೆ ಶತ್ರುಗಳು ಬಾಂಬು ಹಾಕಿದರು ಎಂದು ಹೇಳುತ್ತಿದ್ದರು. ಯುದ್ದವೆಂದರೆ ಇವರಿಗೆ ಬಾಂಬು ಹಾಕುವುದು ಎಂಬುದಷ್ಟು ಮಾತ್ರಾ ತಿಳಿಯುತ್ತಿತ್ತು. ಆದರೆ ಹೆಚ್ಚಿನ ವಿವರ ಇವರಿಗೆ ತಿಳಿಯುತ್ತಿರಲಿಲ್ಲ. ಹಾಗೆಯೇ ಇವರ ತಂದೆಯವರು "ನಿಮಗೆ ಕನ್ನಡ ಓದೋಕೆ

---

೧. ನೆನಪು ಸಿಹಿ–ಕಹಿ, ಪುಟ. ೧೯.

ಬರುತ್ತದಲ್ಲವೇ. ಮೊದಲು ಪೇಪರ್ ಓದೋದನ್ನ ಅಭ್ಯಾಸ ಮಾಡಿಕೊಳ್ಳಿ"[೧] ಎಂದು ಅನುಪಮಾ ಅವರಿಗೆ ಬುದ್ಧಿಯ ಮಾತುಗಳನ್ನು ಹೇಳುತ್ತಿದ್ದರು. ಆ ಸಮಯದಲ್ಲಿ ಇವರಿಗೆ ಪೇಪರ್ ಓದುವ ಆಸಕ್ತಿಯು ಹುಟ್ಟಲಿಲ್ಲ. ಕಥೆಪುಸ್ತಕ ಓದುವುದು ಮಾತ್ರಾ ತುಂಬಾ ಮನಸ್ಸಿತ್ತು. ಇವರ ತಂದೆಗೆ ಬರುತ್ತಿದ್ದ ಸಂಬಳ ಯಾವುದಕ್ಕೂ ಸಾಕಾಗುತ್ತಿರಲಿಲ್ಲ. ಇದರ ಮಧ್ಯೆ ಇವರ ಸಂಸಾರ ದೊಡ್ಡದಾಗಿತ್ತು. ಇವರ ತಂದೆ, ತಾಯಿ, ಮಕ್ಕಳು ಸೇರಿ ಒಟ್ಟು ಒಂಬತ್ತು ಮಂದಿ ಇದ್ದರು. ಗಂಡು ಎರಡು, ಹೆಣ್ಣು ಮೂರು. ಹೆಣ್ಣು ಮಕ್ಕಳಾದ ಇವರಿಗೆ ಒಂದೋ ಎರಡೋ ಚೀಟಿಲಂಗ ಬಿಟ್ಟರೆ ಬೇರೇನೂ ಇರಲಿಲ್ಲ. ನೆಂಟರು ಸಂಬಂಧಿಕರ ಮದುವೆಗೆ ಹೋಗಬೇಕಾದರೆ ಆ ಚೀಟಿಯ ಲಂಗವನ್ನೇ ಹಾಕಿಕೊಂಡು ಹೋಗಬೇಕಾಗಿತ್ತು. "ನಂಗೆ ಒಳ್ಳೆ ಲಂಗ ಇಲ್ಲ, ನಾನು ಬರುವುದಿಲ್ಲ ನೀವೇ ಹೋಗಿ" ಎನ್ನುತ್ತಿದ್ದರು. ಇವರ ವಯಸ್ಸಿನ ಬೇರೆ ಹುಡುಗಿಯರು ಜರತಾರಿಯ ಲಂಗಗಳನ್ನು ಹಾಕಿಕೊಳ್ಳುವುದನ್ನು ಇವರು ನೊಡುತ್ತಿದ್ದರು. ಇವರ ಬಾಲ್ಯವೆಲ್ಲಾ ಒಂದಾದರೂ ಜರತಾರಿ ಲಂಗ ಹೊಲಿಸಿಕೊಳ್ಳುವುದು ಸಾಧ್ಯವಾಗಲಿಲ್ಲ. ಇಂಥಾ ಸಂದರ್ಭದಲ್ಲಿ ಇವರಿಗೆ ಬಡತನದ ಬಗ್ಗೆ ತುಂಬಾ ಬೇಸರವಾಗುತ್ತಿತ್ತು. ೧೯೪೭ನೇ ಇಸವಿಯ ಬೇಸಿಗೆಯಲ್ಲಿ ಇವರ ತಂದೆಗೆ ಬೇಲೂರಿನಿಂದ ಹೊಸಕೋಟೆಗೆ ವರ್ಗವಾದಾಗ ಬೆಂಗಳೂರಿನ ಬಳಿ ಇರುವ ಒಂದು ಪುಟ್ಟ ಊರು. ಇವರ ಜೀವನದಲ್ಲಿ ಆ ವರ್ಷವು ಅತೀ ಪ್ರಮುಖವಾದುದು. ಯಾಕೆಂದರೆ ಅದೇ ವರ್ಷ 'ಕಥೆಗಳನ್ನು' ಅವರು ಗಂಭೀರವಾಗಿ ಬರೆಯಲು ಆರಂಭಿಸಿದ್ದು. ಅವರಿಗೆ ಆಗ ಹದಿಮೂರು ವರ್ಷ. ಉಬ್ಬುತ್ತಿದ್ದ ಎದೆಯ ಬಗ್ಗೆ ಕಾತರ, ಆತಂಕ, ಅದನ್ನು ಮರೆಮಾಚಿಕೊಳ್ಳಲು ಸೀರೆ ತೊಡಲು ಪ್ರಾರಂಭಮಾಡಿದರು. ಇದೆ ಸಮಯದಲ್ಲಿ ಒಂದು ಘಟನೆ ಅವರ ಮನಸ್ಸಿನಲ್ಲಿ ಅಲ್ಲೋಲ ಕಲ್ಲೋಲಗೊಳಿಸಿತು. ಅವರು ಆಗ ತಾನೇ ಸ್ನಾನ ಮುಗಿಸಿ ಬರುತ್ತಿದ್ದಾಗ ಲಂಗವೆಲ್ಲಾ ಕೆಂಪು ಕಲೆಯಾಗಿದೆ. ಅವರು ಆಶ್ಚರ್ಯದಿಂದ ತಾಯಿಯ ಬಳಿಗೆ ಹೋಗಿ "ಅಮ್ಮ ನನಗೇನೋ ಆಗಿದೆ. ರಕ್ತ ಭೇದಿಂತ ಕಾಣುತ್ತಿದೆ"[೨] ಎಂದು ತಾಯಿಯ ಬಳಿ ಲಂಗವನ್ನು ತೋರಿಸುತ್ತಾರೆ. ಅವರ ತಾಯಿ ನಕ್ಕು "ನೀನು ದೊಡ್ಡೋಳಾಗಿದ್ದೀಯ" ಎಂದು ಹೇಳುತ್ತಾರೆ. ಇದನ್ನೆಲ್ಲಾ ನೋಡಿದ ವೆಂಕಟಲಕ್ಷ್ಮೀ "ನನಗೆ ಯಾಕೆ ಹೀಗಾಯ್ತು? ಎಂದು ಜಿಗುಪ್ಸೆ ಮತ್ತು ಕೋಪದಿಂದ ಕೇಳುತ್ತಾರೆ" ಎಲ್ಲಾ ಹುಡುಗಿಯರಿಗೂ ಹೀಗೆಯೇ ಆಗುತ್ತದೆ!

---

೧. ನೆನಪು ಸಿಹಿ–ಕಹಿ, ಪುಟ. ೨೨.
೨. ನೆನಪು ಸಿಹಿ–ಕಹಿ, ಪುಟ. ೩೧.

"ನೀನ್ಯಾಕೆ ಈ ವಿಷಯ ನನಗೆ ಹೇಳಲಿಲ್ಲ?" ಎಂದಾಗ ಅವರ ತಾಯಿ ಸುಮ್ಮನಿರುತ್ತಾರೆ. ಆ ದಿನ ಅವರು ಶಾಲೆಗೆ ಹೋಗುವುದೇ ಇಲ್ಲ, ದಿನಪೂರ್ತಿ ಬರೀಯ ಚಿಂತೆ. ಅದರ ಫಲಶ್ರುತಿ. 'ಏನಾದರೂ ಸರಿ ನಾನು ಡಾಕ್ಟರಾಗಬೇಕು, ಈ ಮುಟ್ಟಾಗೋದನ್ನ ನಿಲ್ಲಿಸುವ ಮೆಡಿಸನ್ ಕಂಡು ಹಿಡಿಯಬೇಕು ಎಂಬ ನಿರ್ಧಾರವನ್ನು ಅವರು ಮಾಡುತ್ತಾರೆ. ಈ ವಿಷಯವನ್ನು ವೆಂಕಟಲಕ್ಷ್ಮೀಯು ಅಕ್ಕಮ್ಮನಿಗೆ ತಿಳಿಸಿದಾಗ ಅವರು ಸಂತೋಷದಿಂದ "ಚೆನ್ನಾಗಿ ಓದು, ಫಸ್ಟ್‌ಕ್ಲಾಸ್‌ನಲ್ಲಿ ಬಾ, ಡಾಕ್ಟರ್ ಆಗುವೀಯಂತೆ!" ಎಂದು ಮೆಚ್ಚುಗೆಯ ಮಾತುಗಳನ್ನು ಆಡುತ್ತಾರೆ. ೧೯೪೯ರಲ್ಲಿ ಎಸ್.ಎಸ್.ಎಲ್.ಸಿ.ಯಲ್ಲಿ ಇವರು ಪ್ರಥಮದರ್ಜೆಯಲ್ಲಿ ತೇರ್ಗಡೆಯಾಗುತ್ತಾರೆ. ಇವರ ಗೆಳತಿಯರು ಆದ ಸ್ವರ್ಣ, ಇಂದಿರಾ ಇವರೂ ತೇರ್ಗಡೆಯಾಗಿದ್ದರು. ಇನ್ನೂ ಇವರಿಗೆ ಕಾಲೇಜು ಸೇರುವ ಸಂಭ್ರಮ ಉಂಟಾಗುತ್ತದೆ.

ಅನುಪಮಾ ಅವರ ತಂದೆ "ಪಿ.ಸಿ.ಎಂ. ಕಾಂಬೀನೇಷನ್‌ಗೆ ಅರ್ಜಿ ಹಾಕು" ಎಂದು ಅವರಿಗೆ ಸಲಹೆಕೊಡುತ್ತಾರೆ. ಆದರೆ ಇವರು ಸಿ.ಬಿಜೆಡ್ ಕಾಂಬಿನೇಷನ್ ತೆಗೆದುಕೊಳ್ಳಲು ಇಚ್ಚಿಸುತ್ತಾರೆ. ಮೊದಲ ವರ್ಷದ ಪರೀಕ್ಷೆ ಮುಗಿದ ಮೇಲೆ ಒಂದು ದಿನ ಇವರ ಉಪಾಧ್ಯಾಯರು ಇವರ ಪೇಪರ್‌ಗಳನ್ನೆಲ್ಲಾ ತಂದು ವಿದ್ಯಾರ್ಥಿನಿಯರಿಗೆ ಟೀಕೆಗಳ ಸಮೇತ ಪೇಪರ್ ವಾಪಾಸ್ ಕೊಡುತ್ತಾರೆ. ಅನುಪಮಾ ಮತ್ತು ಅವರ ಸ್ನೇಹಿತೆಯ ಪೇಪರ್ ಮಾತ್ರಾ ಉಪಾಧ್ಯಾಯರ ಬಳಿಯೇ ಇರುತ್ತದೆ. ಅವರು ಇವರಿಗೆ ಹೇಳುತ್ತಾರೆ. "ಕ್ಲಾಸ್ ಮುಗಿದ ಮೇಲೆ ನೀವಿಬ್ಬರೂ ನನ್ನ ರೂಮಿಗೆ ಬನ್ನಿ" ಎಂದಾಗ ಇವರು ಮತ್ತು ಇವರ ಸ್ನೇಹಿತೆ ಇಬ್ಬರೂ ಭಯದಿಂದ ಅವರ ರೂಮ್‌ಗೆ ಹೋದಾಗ ಅವರು ಒಳಗೆ ಬನ್ನಿ' ಎಂದು ಕರೆಯುತ್ತಾರೆ. "ನಿಮ್ಮ ಹೆಸರು ವೆಂಕಟಲಕ್ಷ್ಮಿತಾನೇ" ಎಂದು ಕೇಳಿದಾಗ ಇವರು ಹೌದು ಎಂದು ಭಯದಿಂದಲೇ ಉತ್ತರಿಸುತ್ತಾರೆ. ಉಪಾಧ್ಯಾಯರ ಮುಖದಲ್ಲಿ ನಗು ಬಂದು ಕನ್ನಡದಲ್ಲಿ ಎಲ್ಲರಿಗಿಂತ ಹೆಚ್ಚು ಅಂಕಗಳನ್ನು ನೀವು ಪಡೆದಿದ್ದೀರಿ. ಈ ಸ್ಥಾನಗಳನ್ನು ಯಾವಾಗಲೂ ಉಳಿಸಿಕೊಳ್ಳಿ ಎಂದು ಹೇಳಿದಾಗ ಇವರಿಗೆ ತುಂಬಾ ಖುಷಿಯೇ ಖುಷಿ ಆಗುತ್ತದೆ. ಅಂದರೆ ಕನ್ನಡವನ್ನು ಇವರು ವಿಶೇಷವಾಗಿ ಅಭ್ಯಸಿಸಿ, ಏಳಿಗೆ ಹೊಂದಬೇಕು ಎಷ್ಟಾದರೂ ಇವರು ಸಾಹಿತ್ಯಾಸಕ್ತರು, ಈ ಭಾಷೆಯನ್ನು ವಿಶೇಷವಾಗಿ ಅಧ್ಯಯನ ಮಾಡಿದರೆ ಇವರ ಬರವಣಿಗೆಗೆ ಇನ್ನಷ್ಟು ಉತ್ತೇಜನ ತುಂಬುವುದು, ಆದರೆ ಡಾಕ್ಟರಾಗಬೇಕೆಂದು ಇವರ ಬಹುದಿನದ ಹಂಬಲ. ಅಕ್ಕಿಯ ಮೇಲೆ ಆಸೆ, ನೆಂಟರ ಮೇಲೆ ಪ್ರೀತಿ ಎನ್ನುವಂತೆ ಆಗುತ್ತದೆ ಇವರ ಸ್ಥಿತಿ. ಇನ್ನೊಂದು ವರ್ಷ ಕಳೆಯಲಿ ಇಂಟರ್ ಮೀಡಿಯೆಟ್

ಪರೀಕ್ಷೆ ಮುಗಿದ ಮೇಲೆ ಮುಂದಿನ ನಿರ್ಧಾರ ಎಂದುಕೊಂಡು ಆ ವಿಷಯವನ್ನು ಅಲ್ಲಿಗೆ ಮರೆತುಬಿಡುತ್ತಾರೆ.

ಇವರ ಮನೆಯ ಕೆಳಗೆ ಬಲಭಾಗದಲ್ಲಿ ಒಂದು ಹರಿಜನರ ಕೇರಿಯು ಇರುತ್ತದೆ. ಇಲ್ಲಿನ ಹರಕು ಮುರುಕು ಗುಡಿಸಲುಗಳಲ್ಲಿದ್ದ ನತದೃಷ್ಟರು. ದಿನವೂ ಅವರು ಇವರ ಕಣ್ಣಿಗೆ ಬೀಳುತ್ತಾರೆ. ಅರೆನಗ್ನ ಜನ, ಅರೆಹೊಟ್ಟೆ, ಊಟ, ರಾತ್ರಿಯೆಲ್ಲ ಹೆಂಡ ಕುಡಿದು ದುಡಿ ಬಾರಿಸಿಕೊಂಡು ಹಾಡುತ್ತಿದ್ದರು. ಪ್ರತಿದಿನವೂ ಸತ್ತ ದನಕರುಗಳನ್ನು ಎಳೆದುಕೊಂಡು ಅವುಗಳ ಚರ್ಮ ಸುಲಿದು ಮಾಂಸ ಬೇಯಿಸಿ ತಿನ್ನುತ್ತಿರುವುದು. ಬಡತನ ಮನುಷ್ಯನನ್ನು ಎಷ್ಟು ಕೀಳು ಅವಸ್ಥೆಗೆ ಇಳಿಸುತ್ತದೆ ಎಂಬುದನ್ನು ಅವರು ಅಲ್ಲಿ ಕಾಣುತ್ತಾರೆ. ಪ್ರಾಣಿಗಳಿಗಿಂತಲೂ ಕೀಳಾಗಿ ಅವರು ಗುದ್ದಾಡುತ್ತಿದ್ದರು. ಆದರೆ ಕಷ್ಟಬಂದಾಗ ಒಟ್ಟಾಗಿಯೂ ನಿಲ್ಲುತ್ತಿದ್ದರು. ಇವರಲ್ಲಿ ಮನುಷ್ಯತ್ವದ ಸೆಲೆ ಒಡೆಯಬೇಕಾದರೆ ಇವರು ಬದುಕುವ ಸ್ಥಿತಿ ಉತ್ತಮವಾಗಬೇಕಲ್ಲವೇ ಎಂದು ಅವರು ಯಾವಾಗಲೂ ಯೋಚಿಸುತ್ತಾರೆ. ದಿನವೂ ಕಾಲೇಜಿಗೆ ಹೋಗಬೇಕಾದಾಗ ಈ ಕೇರಿಯನ್ನು ದಾಟಿಯೇ ಅದರ ಕೆಳಗಣ ಕೊಳಕು ನೀರು ಹರಿಯುವ ಗಟಾರ ದಾಟಿ ಹೋಗಬೇಕಾಗಿರುತ್ತದೆ. ಈ ಜನರ ನೋವನ್ನು ನಿರೂಪಿಸುವ "ಮಣ್ಣು ದಿಬ್ಬದ ಮೇಲೆ" ಎಂಬ ಕತೆಯನ್ನು ಈ ಸಮಯದಲ್ಲಿಯೇ ಬರೆದರೆಂದು ತಿಳಿಯಬಹುದು.

ಆ ಸಂಜೆ ಇವರ ಜೀವನದಲ್ಲಿ ದೊಡ್ಡ ಬದಲಾವಣೆಯನ್ನು ತಂದು ಕೊಡುವ ಘಟನೆಯೊಂದು ಜರುಗುತ್ತದೆ. ಅದನ್ನು ಇವರು ಕನಸು ಮನಸ್ಸಿನಲ್ಲಿಯೂ ನೆನಸಿರಲಿಲ್ಲ. ಸಾಯಂಕಾಲ ಐದು ಗಂಟೆಗೆ ಸರಿಯಾಗಿ ಇವರು ಮತ್ತು ಸ್ನೇಹಿತೆಯರು ಶ್ರೀನಿವಾಸಯ್ಯನವರ ಮನೆಯೊಳಗೆ ಕಾಲಿಟ್ಟಾಗ, ಮಧ್ಯಹಾಲಿನ್ನಲ್ಲಿ ನಾಲ್ಕಾರು ಜನರಿದ್ದರು. "ಬಿಳಿಯ ಷರ್ಟ್ ಪಾಯಜಾಮ ಹಾಕ್ಕೊಂಡಿರುವವರೇ ಕುಳಕುಂದ ಶಿವರಾಯರು"[೧] ಎಂದು ಇವರ ಸ್ನೇಹಿತೆ ಸರೋಜಾ ಮೆಲ್ಲಗಿನ ಧ್ವನಿಯಲ್ಲಿ ಹೇಳಿದಳು. ಅವರನ್ನು ಕಂಡೊಡನೆ ಇವರು ಕಕ್ಕಾಬಿಕ್ಕಿಯಾಗುತ್ತಾರೆ. ಕುಳಕುಂದರಾಯರು ಎತ್ತರದ ದೃಢಕಾಯರಾದ ಸುಮಾರು ಇಪ್ಪಾತ್ತಾರು ಇಪ್ಪತ್ತೇಳರ ತರುಣ, ಗೌರಾಂಗ, ಗುಂಗುರು ಕೂದಲನ್ನು ಹಿಂದಕ್ಕೆ ನಯವಾಗಿ ಚಾಚಿಕೊಂಡಿದ್ದರು. ಉದ್ದವೂ ಅಲ್ಲ, ದುಂಡೂ ಅಲ್ಲ ಅನ್ನುವಂತ ಅಂದವಾದ ಮುಖ ಸಂಪಿಗೆಯ ಮೂಗು ಮುಖಕ್ಕೆ ಸಣ್ಣವೇನೋ

---

೧. ನೆನಪು ಸಿಹಿ–ಕಹಿ, ಪುಟ. ೧೯.

ಎನ್ನುವಂತೆ ಕಣ್ಣುಗಳು. ಆದರೆ ಅವು ತುಂಬಾ ಕಾಂತಿಯುಕ್ತವಾಗಿದ್ದವು. ದಟ್ಟಹುಬ್ಬು, ದೃಢತೆಯನ್ನು ಸೂಚಿಸುವ ತುಟಿಗಳು, ಒಟ್ಟಿನಲ್ಲಿ ಸುರಸುಂದರಾಂಗ ಯುವಕರಾಗಿದ್ದರು. ಸರೋಜಾ ಇವರ ಸ್ನೇಹಿತೆ ಅವರಿಗೆ ಇವರೆಲ್ಲರ ಪರಿಚಯ ಮಾಡಿಕೊಡುತ್ತಾಳೆ. ಇವರ ಸರದಿ ಬಂದಾಗ, "ಇವರ ಹೆಸರು ವೆಂಕಟಲಕ್ಷ್ಮೀ ಇವಳು ಕತೆ ಬರೀತಾರೆ" ಎಂದು ಹೇಳಿದಾಗ ಅದನ್ನು ಕೇಳಿದಾಕ್ಷಣ ಶಿವರಾಯರ ಕಣ್ಣುಗಳು ಮಿನುಗಿದವು. ವೆಂಕಟಲಕ್ಷ್ಮೀ ಅವರಿಗೆ ಆಗ ತಾನೇ ಹದಿನೇಳು ವರ್ಷ ವಯಸ್ಸು. ವಯಸ್ಸಿಗೆ ಅನುಗುಣವಾಗಿ ಅವರು ಮಾತನಾಡುವಾಗ ಇವರನ್ನೇ ದುರುಗುಟ್ಟಿ ನೋಡುತ್ತಿದ್ದರು. ಇವರಿಗೂ ಸಂಕೋಚದ ನಾಚಿಕೆ, ಅನಂತರ ಇವರು ನನ್ನನ್ನೇ ಯಾಕೆ ನೋಡುತ್ತಾರೆ. ನನಗಿಂತ ನನ್ನ ಸ್ನೇಹಿತೆಯರು ಬಲು ಚೆಲುವೆಯರು ಯಾಕೆ ಅವರನ್ನು ನೋಡದೆ ನನ್ನನ್ನೇ ನೋಡುತ್ತಾರೆಂದುಕೊಳ್ಳುತ್ತಾರೆ. ಅನಂತರ ಅವರು ಹೊರಡುವ ಮುನ್ನ ಶಿವರಾಯರು ಇವರತ್ತ ನೋಡಿ, "ನಿಮ್ಮ ಕತೆಗಳನ್ನಾ ಸರೋಜಾ ಅವರ ಹತ್ತಿರ ಕೊಡಿ, ಅವರು ನನಗೆ ತಲುಪಿಸುತ್ತಾರೆ. ಓದಿನೋಡಿ ಹಿಂತಿರುಗಿಸ್ತಿನಿ" ಎಂದು ಹೇಳುತ್ತಾರೆ. ಅದನ್ನು ಕೇಳಿದ ಇವರು ಸಂತೋಷದೊಂದಿಗೆ ಅರೆ ಕ್ಷಣ ಹೃದಯ ಢವಗುಟ್ಟುತ್ತದೆ. ಮನೆಗೆ ಬಂದು ಅಂದು ರಾತ್ರಿ ಇವರು ದಿನಚರಿಯಲ್ಲಿ ಬರೆದುಕೊಳ್ಳುತ್ತಾರೆ. ಮದುವೆಯಾದರೆ ಇಂಥವರನ್ನೇ ಎಂದುಕೊಳ್ಳುತ್ತಾರೆ. ಕುಲಕುಂದರಾಯರ ಇನ್ನೊಂದು ಹೆಸರು ನಿರಂಜನ ಎಂದು ಇದನ್ನು ಕೇಳಿ ಇವರ ಮನಸ್ಸು ಹುಚ್ಚೆದ್ದು ಕುಣಿಯುತ್ತದೆ. ಹಾಗೆಯೇ ಇವರ ಪ್ರೀತಿಪ್ರೇಮ ಸುಮಾರು ಐದು ವರ್ಷಗಳವರೆಗೆ ಮುಂದುವರೆಯುತ್ತದೆ. ಅದೆ ಸಮಯದಲ್ಲಿ ನಿರಂಜನರು ವೆಂಕಟಲಕ್ಷ್ಮೀಯವರನ್ನು ನಿಮಗೆ ಈ ಹೆಸರು ಚೆನ್ನಾಗಿಲ್ಲ. ನಾನೊಂದು ಹೆಸರನ್ನು ತಿಳಿಸುತ್ತೇನೆ. ಅದರಲ್ಲಿ ನಿಮಗಿಷ್ಟವಾದುದನ್ನು ಆರಿಸಿಕೊಳ್ಳಿ ಎಂದಾಗ ಅನುಪಮಾ, ನಿರುಪಮಾ, ರಾಧಿಕ ಇದರಲ್ಲಿ ವೆಂಕಟಲಕ್ಷ್ಮೀಯವರು ಅನುಪಮಾ ಎಂಬ ಹೆಸರನ್ನು ಆರಿಸಿಕೊಳ್ಳುತ್ತಾರೆ. ಅಲ್ಲಿಂದ ಅವರನ್ನು ಅನುಪಮಾ ಎಂದು ಕರೆಯಲಾಯಿತು.

ಅನುಪಮಾ ಅವರಿಗೆ ಮೆಡಿಕಲ್‌ನಲ್ಲಿ ಮೊದಲನೆ ದರ್ಜೆಯಲ್ಲಿ ಸೀಟು ಸಿಗುತ್ತದೆ. ಆದರೆ ಇವರ ಮನೆಯಲ್ಲಿ ತಂದೆಗೆ ಅಷ್ಟೊಂದು ದುಡ್ಡನ್ನು ಕಟ್ಟಿ ಹೆಚ್ಚಿನ ವಿದ್ಯಾಭ್ಯಾಸವನ್ನು ಮಾಡಿಸುವಷ್ಟು ಸಾಮರ್ಥ್ಯ ಇರುವುದಿಲ್ಲ. ಯಾಕೆಂದರೆ ದೊಡ್ಡ ಗಾತ್ರದ ಸಂಸಾರವನ್ನು ನಿಭಾಯಿಸುವುದೇ ಆಗಿರುತ್ತದೆ. ಆ ಸಮಯದಲ್ಲಿ ಅನುಪಮಾ ಅವರ ಅಕ್ಕಮ್ಮಾ ಮಾತ್ರಾ ಸಂತೋಷದಿಂದ ಮೆಡಿಕಲ್ ಕೋರ್ಸ್ ಮುಗಿಸಲು ಓದಲು ಅನುವು ಮಾಡಿಕೊಡುತ್ತಾರೆ. ಅಂದರೆ ಮಕ್ಕಳಿಗೆ ಆಸಕ್ತಿ ಇರುವದನ್ನು ಮಾಡಿಸುವುದು.

ತಂದೆ, ತಾಯಿಯವರ ಜವಾಬ್ದಾರಿ ಎಂದು ಅನುಪಮಾ ಅವರ ತಂದೆಗೆ ಹೇಳುತ್ತಾರೆ. ಆದರೆ ಅವರ ತಂದೆಯವರು ಅಷ್ಟು ದುಡ್ಡು ನನ್ನ ಹತ್ತಿರ ಇಲ್ಲ ಎಂದಾಗ ಅಕ್ಕಮನವರು ಹಾಸ್ಟೆಲಿನ ಫೀಜು ೪೦ ರೂ.ಗಳು ಅದರಲ್ಲಿ ನಾನರ್ಧ ನೀನರ್ಧ ಹಾಕಿ ಓದಿಸೋಣ ಎಂದು ನಿರ್ಧರಿಸಿ ಇವರನ್ನು ಮೆಡಿಕಲ್ ಕಾಲೇಜಿಗೆ ಸೇರಿಸುತ್ತಾರೆ. ಇಷ್ಟು ಕಷ್ಟವಿದ್ದರೂ ಅನುಪಮಾ ಅವರು ಎಂ.ಬಿ.ಬಿ.ಎಸ್. ಮುಗಿಸಲು ನಿರ್ಧರಿಸುತ್ತಾರೆ. ಈ ವಿಷಯವನ್ನೆಲ್ಲಾ ನಿರಂಜನರಿಗೆ ಇವರು ತಿಳಿಸಿದಾಗ ಅವರಿಗೆ ಬೇಸರವಾಗುತ್ತದೆ. ಆದರೆ ಅನುಪಮಾರವರು ವೈದ್ಯಕೀಯ ತರಬೇತಿಯನ್ನು ಪಡೆದರೂ ಸಾಹಿತ್ಯವನ್ನು ಬಿಡುವುದಿಲ್ಲ ಎಂದಾಗ ನಿರಂಜನರಿಗೆ ತುಂಬಾ ಖುಷಿಯಾಗಿ ಅವರನ್ನು ಓದಲು ಅನುವು ಮಾಡಿಕೊಡುತ್ತಾರೆ.

ಇವರ ಮೆಡಿಕಲ್ ಮುಗಿಯುವ ಹೊತ್ತಿಗೆ ಇವರಿಗೆ ವಿವಾಹ ಮಾಡಬೇಕೆಂದು ತಂದೆ ನಿರ್ಧರಿಸಿದಾಗ ಅನುಪಮಾರವರು ನಿರಂಜನರನ್ನೇ ವಿವಾಹವಾಗುವುದಾಗಿ ಅವರ ಇಂಗಿತವನ್ನು ವ್ಯಕ್ತಪಡಿಸಿದಾಗ ತಂದೆಯವರಿಗೆ ಬೇರೆ ಜಾತಿಯ ಹುಡುಗನನ್ನು ವಿವಾಹವಾಗುವುದೇ ಅದು ಅಂತರ್ಜಾತಿ ಎಂದು ಕಿಡಿಕಾರುತ್ತಾರೆ. ನೀನು ಕಾಲೇಜಿಗೆ ಹೋಗುವುದೇ ಬೇಡ. ಮನೆಯಲ್ಲಿಯೇ ಇರು ಎಂದು ಹೇಳುತ್ತಾರೆ. ಅನುಪಮಾರವರು ಹಟ ಮಾಡಿದರೆ ನನ್ನ ತಂದೆಯವರು ಜಾತಿಯ ಯಾರಾದರೊಬ್ಬ ಹುಡುಗನಿಗೆ ಗಂಟು ಕಟ್ಟುತ್ತಾರೆ ಎಂದು ತಿಳಿದು ಪುನಃ ಮಾರನೆಯ ದಿನ ನಾಜೂಕಿನಿಂದ ತಂದೆಯಿಂದ ತಪ್ಪಿಸಿಕೊಳ್ಳಲು "ಅಪ್ಪ ನೀವು ಯೋಚಿಸಿದಂತೆಯೇ ನಾನು ನಿರ್ಧಾರ ತೆಗೆದುಕೊಳ್ಳುತ್ತೇನೆ" ಎಂದಾಗ ಅವರ ತಂದೆ ಇದಪ್ಪಾ ಬದುಕುವವರ ಬುದ್ಧಿ ಎಂದು ಹೇಳಿದಾಗ ಅನುಪಮಾರವರು ಮನೆಯಿಂದ ಹೊರಗೆ ಬರುತ್ತಾರೆ. ಇನ್ನೊಂದು ವರ್ಷ ಮೆಡಿಕಲ್ ತರಬೇತಿ ಇದ್ದರೂ, ಈ ವಿಷಯವನ್ನು ನಿರಂಜನರಿಗೆ ತಿಳಿಸಿದಾಗ ಅವರು ನನ್ನಿಂದ ನಿಮ್ಮನ್ನು ಬಿಟ್ಟಿರಲು ಆಗುವುದಿಲ್ಲ. ಬೇಗ ನಾವು ರಿಜಿಸ್ಟರ್ ಮದುವೆಯಾಗೋಣ ಎಂದು ಅನುಪಮಾ ಅವರಿಗೆ ತಿಳಿಸಿದಾಗ ನಿಮ್ಮ ಇಷ್ಟವೇ ನನ್ನ ಇಷ್ಟ ಎಂದು ಇವರು ತಿಳಿಸುತ್ತಾರೆ. ಅಂದರೆ ಇವರು ಮದುವೆಯಾಗುವಾಗ ನಿಮ್ಮ ಮೆಡಿಕಲ್ ಕೋರ್ಸ್‌ಗೆ ಯಾವುದೇ ರೀತಿಯ ತೊಂದರೆಯಾಗುವುದಿಲ್ಲ ಎಂದು ತಿಳಿಸುತ್ತಾರೆ.

ಅನುಪಮಾ ಅವರು ಮದುವೆಯನ್ನು ಎಲ್ಲಿ ಮಾಡಿಕೊಳ್ಳುವುದು, ಬೆಂಗಳೂರಿನಲ್ಲಿ ನಮ್ಮ ಬಂಧುಬಳಗದವರು ತುಂಬಾ ಇದ್ದಾರೆ ಎಂದು ಅನುಪಮಾರವರು ಹೇಳಿದಾಗ ಇಲ್ಲಿ ಮದುವೆಯಾಗುವುದು ಬೇಡ ಎಂದಾಗ

ನಿರಂಜನರು ಹಾಗೆಯೇ ಆಗಲಿ ಎನ್ನುತ್ತಾರೆ. ನೀವು ಪರೀಕ್ಷೆಗೆ ಓದಿಕೊಳ್ಳಿ ನಾನು ಮದುವೆಗೆ ಎಲ್ಲಾ ರೀತಿಯಲ್ಲೂ ಸಿದ್ಧತೆ ಮಾಡುತ್ತೇನೆ ಎನ್ನುತ್ತಾರೆ. ಆದರೆ ಇವರು ಅಷ್ಟು ಹಣಕಾಸಿನಲ್ಲಿ ಶ್ರೀಮಂತರಲ್ಲ. ಸ್ನೇಹಿತರ ಸಹಕಾರ ಸಹಾಯದಿಂದ ಮದುವೆಗೆ ಬೇಕಾದ ವಸ್ತ್ರ, ಒಡವೆ, ಇವೆಲ್ಲವನ್ನೂ ಸಾಲವಾಗಿ ಪಡೆದು ತಿರುಪತಿಯ ಒಂದು ಬಡ ಛತ್ರದಲ್ಲಿ ನಿರಂಜನರ ತಾಯಿ ಹಾಗೂ ಸ್ನೇಹಿತರು, ಅನುಪಮಾ ಅವರ ತಮ್ಮ ವಿಶ್ವನಾಥ, ಹಾಗೆಯೇ ಉಳಿದ ಜನರೆಲ್ಲಾ ನಿರಂಜನರ ಕಡೆಯವರೇ ಬಂದಿರುತ್ತಾರೆ. ಅವರೇ ಧಾರೆಯೆರೆದು ಕೊಡುತ್ತಾರೆ. ಹಾಗೇ ವಿವಾಹವಾದ ಮೇಲೆ ನಿರಂಜನರ ಸ್ನೇಹಿತರ ಆಹ್ವಾನಗಳು ಜಾಸ್ತಿಯಾಗಿದೆ. ಅಂದರೆ ಅವರು ಇವರನ್ನು ಚಹಾಕೂಟಗಳನ್ನು ಏರ್ಪಡಿಸಿ ಇವರನ್ನು ಬರಮಾಡಿಕೊಳ್ಳುತ್ತಾರೆ. ಅದೇ ರೀತಿಯಲ್ಲಿ ಸುಖಸಂತೋಷವನ್ನೆಲ್ಲಾ ಬದಿಗೊತ್ತಿ ಮೆಡಿಕಲ್‌ಗಾಗಿ ಅದನ್ನೆಲ್ಲಾ ಮುಗಿಸುವ ಕೊನೆಯ ವರ್ಷಕ್ಕೆ ಸಾಕಷ್ಟು ಶ್ರಮದಿಂದ ಓದುತ್ತಾರೆ. ಯಾಕೆಂದರೆ ಮದುವೆಯಾದ ಮೇಲೆ ಮೆಡಿಕಲ್‌ನ ಓದು ಕುಂಠಿತವಾಯಿತು ಎಂಬ ಅಪಹಾಸ್ಯಕ್ಕೆ ಗುರಿಯಾಗಬಾರದು ಎಂದು ತಿಳಿದು ಕಷ್ಟಪಟ್ಟು ಓದುತ್ತಾರೆ. ಅದಕ್ಕೆ ತಕ್ಕಂತೆ ಪ್ರಥಮದರ್ಜೆಯಲ್ಲಿ ತೇರ್ಗಡೆ ಹೊಂದುತ್ತಾರೆ.

ಅಂತರ್ಜಾತಿ ವಿವಾಹವಾದ ಮೇಲೆ ಹಲವಾರು ರೀತಿಯಲ್ಲಿ ಅವಮಾನಗಳನ್ನು ಇವರು ಎದುರಿಸಬೇಕಾಯಿತು. ಆಗಿನ ದಿನಗಳಲ್ಲಿ ಇವರು ಪಟ್ಟ ಮಾನಸಿಕ ಯಾತನೆ ಕೊನೆಯಿಲ್ಲದ್ದು, ತಾಯಿ ತಂದೆ ಇವರನ್ನು ಪೂರ್ಣವಾಗಿ ಬಹಿಷ್ಕರಿಸಿದರು. ಅವರಿಂದ ಕಾಗದ ಪತ್ರಗಳೂ ಇರಲಿಲ್ಲ. ಇವರ ತಮ್ಮ ವಿಶ್ವನಾಥ ಯಾವಾಗಲಾದರೊಮ್ಮೆ ಬಂದು ಹೋಗುತ್ತಿದ್ದ. ಇವರ ಬಂಧುಬಳಗದವರೆಲ್ಲಾ ಮಾಡಬಾರದ ದೊಡ್ಡ ಅಪರಾಧ ಮಾಡಿದ್ದಾರೆ ಎನ್ನುವ ಹಾಗೆ ಕಿಡಿಕಾರುತ್ತಿದ್ದರು. ಇವರ ಮನೆಯ ರಸ್ತೆಯಲ್ಲಿದ್ದ ಮಹನೀಯರೊಬ್ಬರು "ಈ ನಿರಂಜನಾಗೆ ಬ್ರಾಹ್ಮಣ ಹುಡುಗಿಯೊಬ್ಬಳು ಸಿಗಲಿಲ್ವೆ ಮದುವೆಯನ್ನು ಮಾಡಿಕೊಳ್ಳೋಕೆ?" ಎಂದು ಇವರ ಬೆನ್ನ ಹಿಂದೆ ಹಾಸ್ಯಮಾಡಿದ್ದರು. ಮುಂದೊಂದು ದಿನ ಈ ಮಹನೀಯರೇ ಹೆಂಡತಿಗೆ ಹೆರಿಗೆ ಬೇನೆ ಬಂದಾಗ ಸಹಾಯ ಮಾಡಲು ಇವರೇ ಹೋಗಬೇಕಾಯಿತು. ಆಂಬ್ಯುಲೆನ್ಸ್ ತರಿಸಿ ಚೆಲುವಾಂಬ ಆಸ್ಪತ್ರೆಗೆ ಆಕೆಯನ್ನು ಕರೆದೊಯ್ದು ಆಕೆಯ ಹೆರಿಗೆಗೆ ಇವರು ನೆರವಾದ ಮೇಲೆ ಆ ಮಹಾನುಭಾವರೇ ಇವರ ಬಗ್ಗೆ ಗೌರವ ಆದರಗಳಿಂದ ನೋಡಿದರು.

ವೈದ್ಯಕೀಯ ಕ್ಷೇತ್ರದಲ್ಲಿ ಆಗಿನ ಕಾಲದಲ್ಲಿ ಹೆಂಗಸರು ಪ್ರವೇಶ ಮಾಡುತ್ತಿದ್ದುದೇ ತುಂಬಾ ವಿರಳ. ಅದರಲ್ಲೂ ಮಹಿಳೆಯರು ಸಾಮಾನ್ಯವಾಗಿ ಉನ್ನತವಾದ ಶಿಕ್ಷಣ

ಪಡೆಯುವುದು ತುಂಬಾ ಅಪರೂಪವಾಗಿದ್ದ ಕಾಲ ಅದು. ಆ ಕಾಲದಲ್ಲಿ ಅನುಪಮಾ ಅವರು ವೈದ್ಯಕೀಯ ಕ್ಷೇತ್ರವನ್ನು ಆಯ್ದುಕೊಂಡರು. ಅವರು ಪಡೆದಂತಹ ಶಿಕ್ಷಣವನ್ನು ಸರಿಯಾಗಿ ಬಳಸಿಕೊಂಡರು. ಇದರಿಂದ ಕನ್ನಡಿಗರಿಗೆ ತಿಳುವಳಿಕೆಯನ್ನು ತಿಳಿಸಿಕೊಟ್ಟರು. ಅವರು "ಕೇಳು ಕಿಶೋರಿ", "ಶಿಶುವೈದ್ಯ ದೀಪಕೆ", "ಆರೋಗ್ಯ ದರ್ಶನ", "ಒತ್ತಡದ ಬೇನೆಗಳು", "ಕೆಂಪಮ್ಮನ ಮಗು" ಹೀಗೆ ತುಂಬಾ ಪುಸ್ತಕಗಳನ್ನು ಬಿಡುಗಡೆ ಮಾಡಿದರು.

ವೈದ್ಯೆಯಾಗಿ ಅನುಪಮಾ ಅವರು ತುಂಬಾ ಪ್ರಸಿದ್ಧವಾದರು. ಬೆಂಗಳೂರು ಹಾಗೂ ಧಾರವಾಡ ಎರಡು ಕಡೆಗಳಲ್ಲಿ ಆಸ್ಪತ್ರೆಗಳನ್ನು ತೆರೆದರು. ಹಾಗೆಯೇ ಪತ್ರಿಕೆಗಳ ಮೂಲಕ ಜನರಿಗೆ ಆಪ್ತಸಲಹೆಗಳನ್ನು ನೀಡುತ್ತಿದ್ದರು. ಇದರಿಂದ ವೈದ್ಯಕೀಯದಲ್ಲಿ ಹೆಚ್ಚಿನ ನಂಬಿಕೆ, ಭರವಸೆಯನ್ನು ಮೂಡಿಸಿದವು. ವೈದ್ಯಕೀಯ ಜೀವನಕ್ಕೆ ಸಮೀಪವಾದ ಇವರ ಸಣ್ಣ ಕಥೆಗಳಲ್ಲಿ ಕಾದಂಬರಿಗಳಲ್ಲಿ ಕಂಡುಬಂದಿದೆ. ಪ್ರಾರಂಭದ ಕಾದಂಬರಿ "ಶ್ವೇತಾಂಬರಿ"ಯಲ್ಲಿ ವೈದ್ಯಕೀಯ ಜೀವನಕ್ಕೆ ಸಂಬಂಧಿಸಿದ ಮೊದಲ ಕಥೆ 'ವಿಜಯಾ'ದಲ್ಲಿಯೂ ಮೂಡಿಬಂದಿದೆ.

ವೈದ್ಯಕೀಯದ ಬಗ್ಗೆ ಆ ಕಾಲದಲ್ಲಿ ಬರೆಯುವ ಮಹಿಳಾ ಲೇಖಕರಂತೂ ಇರುತ್ತಿರಲೇ ಇಲ್ಲ. ಆ ಸಂದರ್ಭದಲ್ಲಿ ಪತ್ರಿಕೆಯ ಅಂಕಣಕ್ಕೆ ಎಲ್ಲಾ ಪತ್ರಿಕೆಗಳಿಗೂ ಅನುಪಮಾ ಅವರನ್ನೇ ಬರೆಯಲು ಒತ್ತಾಯಿಸಿದರು. ಇದರಿಂದಾಗಿ ಅನುಪಮಾ ಅವರಿಂದ ಹಲವು ವೈದ್ಯಕೀಯ ಬರಹವು ಸಿಕ್ಕಿದವು ಎಂದರೆ ತಪ್ಪಾಗಲಾರದು. ಅಂದರೆ ವೃತ್ತಿಯಲ್ಲಿ ವೈದ್ಯೆಯಾಗಿದ್ದು ಇಷ್ಟೆಲ್ಲಾ ಸಾಧನೆಯನ್ನು ಗಳಿಸಿದ್ದಾರೆ.

ಪ್ರವೃತ್ತಿಯಲ್ಲಿ ಲೇಖಕಿಯಾದ ಅನುಪಮಾ ಅವರ ಹದಿಮೂರನೆಯ ವಯಸ್ಸಿನಲ್ಲಿ ಬರೆಯಲು ಪ್ರಾರಂಭಿಸಿದರು. ಅನುಪಮಾ ಅವರು ತಾವು ಬರೆದ ಬರವಣಿಗೆಯನ್ನು ತಮ್ಮ ಗೆಳೆಯರಿಗೆ ತೋರಿಸಿ ಅವರಿಂದ ಒಳ್ಳೆಯ ಅಭಿಪ್ರಾಯಗಳು ಬಂದ ನಂತರ ಅದನ್ನು ಪತ್ರಿಕೆಗಳಿಗೆ ಕಳುಹಿಸುತ್ತಿದ್ದರು. ಪತ್ರಿಕೆಗಳ ಉತ್ತೇಜನದಿಂದ ಅವರ ಹೆಚ್ಚಿನ ಬರವಣಿಗೆಗಳು ಪತ್ರಿಕೆಗಳಲ್ಲಿ ಬಂದವು. ಅನುಪಮಾ ಅವರು ಇದರಿಂದಾಗಿ ತುಂಬಾ ಪ್ರಸಿದ್ಧವಾದರು. ಅನುಪಮಾ ಅವರು ಹದಿಮೂರನೆಯ ವಯಸ್ಸಿನಲ್ಲಿದ್ದಾಗ ಅನೇಕ ಸಣ್ಣಕಥೆಗಳನ್ನು ಬರೆಯುತ್ತಿದ್ದರು. "ಕಣ್ಮಣಿ" ಅವರ ಮೊದಲ ಕಥೆ; ಈ ಕೃತಿಗೆ ಮುನ್ನುಡಿಯನ್ನು ಚದುರಂಗರು ಬರೆದಿದ್ದು ಅನುಪಮಾ ಅವರಿಗೆ ಅಪಾರ ಸಂತೋಷವನ್ನು ಉಂಟುಮಾಡಿದವು. ಅನುಪಮಾ ಅವರ ಸಾಹಿತ್ಯಕ ಬದುಕಿನಲ್ಲಿ ಪತ್ರಿಕೆಗಳು ತುಂಬಾ ಮಹತ್ವದ ಪಾತ್ರವಹಿಸಿದವು. ಅಂದರೆ

ಪ್ರಜಾವಾಣಿ, ತರಂಗ, ಸಂಯುಕ್ತ ಕರ್ನಾಟಕ ಮುಂತಾದ ಪತ್ರಿಕೆಗಳು ಜನಪ್ರಿಯಗೊಳಿಸಿದವು.

ಅನುಪಮಾ ಅವರ ಮೊದಲ ಕಾದಂಬರಿ ಭಾವನಾತ್ಮಕ ಗುಣವೇ ಪ್ರಮುಖವಾದುದಾಗಿದೆ. ಇದೆಲ್ಲವನ್ನು ತಿಳಿದ ನಿರಂಜನರು ಇಂತಹ ಭಾವನಾತ್ಮಕ ಕಾದಂಬರಿಗಳನ್ನು ಬರೆಯುವುದಕ್ಕಿಂತ ಗಂಭೀರ ವಿಷಯ ತೆಗೆದುಕೊಂಡು ಬರೆದರೆ ಅಂಥ ಕಾದಂಬರಿ ನಾಲ್ಕು ದಿನವಾದರೂ ಜನರಲ್ಲಿ ಉಳಿಯುತ್ತದೆ ಎಂದಿದ್ದರಂತೆ. ಮಾಧವೀಯ ಮೊದಲಿನ ಸಾಹಿತ್ಯದಲ್ಲಿ ಶೋಷಣೆ, ಮೂಢನಂಬಿಕೆಗಳ ಭಂಡಾರವಿದೆ. ಇದಾದ ನಂತರದಲ್ಲಿ ಸ್ತ್ರೀಕೇಂದ್ರಿತ ಬರವಣಿಗೆ, ಸ್ತ್ರೀ ವಿವೇಚನೆಯ ದೃಷ್ಟಿ ಕಾಣುವುದನ್ನು ನಾವು ನೋಡಬಹುದು. ಅನಂತರದಲ್ಲಿ ಪ್ರವಾಸ ಸಾಹಿತ್ಯ ಕವನ ಹಾಗೂ ಪ್ರಬಂಧಗಳನ್ನು ಬರೆಯತೊಡಗಿದರು. ಅದೇ ರೀತಿಯಲ್ಲಿ ಸಾಹಿತ್ಯಾಸಕ್ತರಾಗಿದ್ದ ಅನುಪಮಾ ಅವರನ್ನು ಸಭೆಸಮಾರಂಭಗಳಲ್ಲಿ ಭಾಗವಹಿಸಿದಾಗ ಅಲ್ಲಿ ಆಗಮಿಸಿದಂತಹ ಜನರು ಇವರನ್ನು ಪ್ರಶ್ನೆ ಮಾಡುತ್ತಾರೆ. ಅದೇನೆಂದರೆ ನೀವು ವೃತ್ತಿಯಾಗಿ ಸಾಹಿತ್ಯವನ್ನು ಅವಲಂಬಿಸುತ್ತಿರೋ ಅಥವಾ ವೈದ್ಯಕೀಯ ವೃತ್ತಿಯನ್ನು ಅವಲಂಬಿಸುತ್ತಿರೋ ಎಂದು ಕೇಳಿದಾಗ ಅನುಪಮಾ ಅವರು ಉತ್ತರಿಸಿದ್ದು ಎರಡು ವೃತ್ತಿಯನ್ನು ಎಂದು ಹೇಳುತ್ತಾರೆ. ಆದರೆ ನೀವು ಎರಡು ವೃತ್ತಿಯಲ್ಲಿ ಒಂದನ್ನು ಮಾತ್ರ ಆರಿಸಿಕೊಳ್ಳಬೇಕೆಂದು ಅಭಿಮಾನಿಗಳು ಕೇಳಿದಾಗ ಅನುಪಮಾ ಅವರು ಉತ್ತರಿಸಿದ್ದು ಹೀಗೆ "ಸಾಹಿತ್ಯವನ್ನೇ" ಎಂದು ಹೇಳಿದರು. ಅಂದರೆ ವೃತ್ತಿಯಲ್ಲಿ 'ವೈದ್ಯೆಯಾಗಿ' ಪ್ರವೃತ್ತಿಯಲ್ಲಿ ಸಾಹಿತಿಯಾಗಿದ್ದರು ಎಂದು ತಿಳಿಯಲು ಸಾಧ್ಯವಾಯಿತು. ವೈದ್ಯಕೀಯ ವೃತ್ತಿಯಲ್ಲಿದ್ದರೂ ಕಥೆ ಕಾದಂಬರಿಗಳನ್ನು ಬರೆಯುವುದನ್ನು ಇವರು ನಿಲ್ಲಿಸಲಿಲ್ಲ. ಹಾಗೆಯೇ ವೈದ್ಯೆಯಾಗಿದ್ದರೂ ಎರಡನ್ನೂ ಸಂಯಮದಿಂದಲೇ ನಿಭಾಯಿಸಿಕೊಂಡು ಬಂದಿದ್ದರು ಎಂದು ತಿಳಿಯಬಹುದಾಗಿದೆ.

ಅನುಪಮಾ ಅವರಿಗೆ ಕ್ಯಾನ್ಸರ್ ಕಾಯಿಲೆ ಬಂದ ಮೇಲೂ ತುಂಬಾ ಶ್ರಮದಿಂದ ಎರಡು ವೃತ್ತಿಯಲ್ಲೂ ದುಡಿದರು. ಅನಂತರ ವೈದ್ಯಕೀಯ ವೃತ್ತಿಯನ್ನು ನಿಲ್ಲಿಸಬೇಕಾಯಿತು. ಇವರಿಗೆ ಎರಡು ಹೆಣ್ಣುಮಕ್ಕಳು. ಅವರಲ್ಲಿ ಮೊದಲನೆಯವಳು ತೇಜಸ್ವಿನಿ, ಎರಡನೆಯ ಮಗಳು ಸೀಮಂತಿನಿ ಎಂಬುವವರು. ಇವರೂ ಕೂಡ ತಂದೆ-ತಾಯಿಯರಂತೆ ಸಾಹಿತ್ಯದಲ್ಲಿ ಲೇಖನಗಳನ್ನು ಬರೆಯುವುದರಲ್ಲಿ ಆಸಕ್ತಿಯುಳ್ಳವರಾಗಿದ್ದರು. ಹಾಗೆಯೇ ಇವರ ಎರಡನೆಯ ಮಗಳು ಸೀಮಂತಿನಿಯ

ಪ್ರೀತಿ, ಸಹನೆ, ಸಹಕಾರಗಳಿಂದಲ್ಲೇ ಅನುಪಮಾ ಅವರು ಆರೋಗ್ಯದಲ್ಲಿ ಸಾಕಷ್ಟು ಸುಧಾರಣೆಯನ್ನು ಹೊಂದಬೇಕಾಯಿತು ಎಂದು ಹೇಳಿದರೆ ತಪ್ಪಾಗಲಾರದು.

ಅನುಪಮಾ ಅವರ ಪ್ರತಿಭೆಗೆ ಸಾಕಷ್ಟು ಪ್ರಶಸ್ತಿಗಳು ಲಭಿಸಿವೆ. 'ರೂವಾರಿಯ ಲಕ್ಷ್ಮಿ' ಕಥಾಸಂಕಲನಕ್ಕೆ ರಾಜ್ಯಪ್ರಶಸ್ತಿ, ೧೯೭೭ರಲ್ಲಿ ಸೋವಿಯತ್ ಲ್ಯಾಂಡ್ ನೆಹರೂ ಪ್ರಶಸ್ತಿ, ಆತ್ಮಕಥನ 'ನೆನಪು ಸಿಹಿಕಹಿ'ಗೆ ಸಾಕಷ್ಟು ಪ್ರಶಸ್ತಿಗಳು ಲಭಿಸಿವೆ. 'ರೂವಾರಿಯ ಲಕ್ಷ್ಮೀ' ಕಥಾಸಂಕಲನಕ್ಕೆ ರಾಜ್ಯಪ್ರಶಸ್ತಿ, ೧೯೭೭ರಲ್ಲಿ ನಂಜನಗೂಡು ತಿರುಮಲಾಂಬ ಪ್ರಶಸ್ತಿ. ಇದಲ್ಲದೆ ೧೯೭೭ರಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಗೌರವ, ಮಾನ ಸನ್ಮಾನಗಳ ದೊರೆತಿವೆ. ಅವರ 'ಋಣ' ಕಾದಂಬರಿ ಚಲನಚಿತ್ರವಾಗಿ ಜನಪ್ರಿಯಗಳಿಸಿವೆ. ಬದುಕಿಗೆ ಬದ್ಧರಾದ, ಜನಪರ ನಿಲುವಿನ ಖಚಿತ ಸಿದ್ಧಾಂತ ಮತ್ತು ಧೋರಣೆಗಳ ಕೆಲವರೇ ಕನ್ನಡ ಸಾಹಿತಿಗಳಲ್ಲಿ ಅನುಪಮಾ ಒಬ್ಬರು. 'ಸಾಹಿತ್ಯಕ್ಕಾಗಿ ಸಾಹಿತ್ಯ' ಎಂದು ತಿಳಿಯದೆ "ಸಾಹಿತ್ಯ ಪ್ರತ್ಯಕ್ಷವಾಗಿ ಅಲ್ಲದಿದ್ದರೂ ಪರೋಕ್ಷವಾಗಿ ಬದಲಾವಣೆಗಳಿಗೆ ನೆರವಾಗಬೇಕು" ಎಂದು ನಂಬಿದವರು. ನಡೆನುಡಿಗಳಲ್ಲಿ ಏಕತೆಯನ್ನು ತೋರಿಸಿಕೊಟ್ಟವರು. ಸಾಹಿತ್ಯದ 'ದಂತಗೋಪುರ'ದಲ್ಲಿ ಉಳಿಯದೆ ಜನಪರ ಹೋರಾಟಗಳಲ್ಲಿ ಸ್ವತಃ ಭಾಗವಹಿಸಿದ ಸಾಹಿತಿ ಡಾ. ಅನುಪಮಾ, ಸ್ನೇಹಜೀವಿ, ಪ್ರೋತ್ಸಾಹಕಿ, ಬದುಕಿಗಾಗಿ ಹೋರಾಡಿದ ವೀರವನಿತೆ; ಅವರ ಜೀವನವೇ ಒಂದು ವೀರಗಾಥೆ. ಡಾ. ಅನುಪಮಾ ನಿರಂಜನರ ಸಾಹಿತ್ಯ ಎಷ್ಟು ಅಭ್ಯಾಸಯೋಗ್ಯವೋ ಅವರ ಬದುಕು ಕೂಡ ಅಷ್ಟೇ ಅಭ್ಯಾಸ ಯೋಗ್ಯವಾಗಿದೆ.

ಹೀಗೆ ಅನುಪಮಾರವರು ಬದುಕು ಸಾಗಿಸಿ ಬದುಕಿದ್ದಾಗಲೇ ಸಾವು ಸಮೀಪಿಸುತ್ತಿದೆ ಎಂಬುದನ್ನು ಬಲ್ಲವರಾಗಿದ್ದ ಅನುಪಮಾ ಸಾವನ್ನು ನಿರೀಕ್ಷಿಸುತ್ತಲ್ಲೇ ಕಾರ್ಯ ಮುಂದುವರೆಸಿದ ಅವರ ಕಾರ್ಯತತ್ಪರತೆ ಶ್ಲಾಘನೀಯ. ೧೯೯೧ರಲ್ಲಿ ಇವರು ದೈವಾಧೀನರಾದರು.

*****

# ಅಧ್ಯಾಯ – ೩

# ಅನುಪಮಾ ನಿರಂಜನರ ಸಾಹಿತ್ಯಕ ಒಟ್ಟು ಸಾಧನೆ

"ಅನುಪಮಾ ಅವರು ತಮ್ಮ ಹದಿಮೂರನೆಯ ವಯಸ್ಸಿನಿಂದ ಕಥೆಗಳನ್ನು ಬರೆಯುತ್ತಿದ್ದುದು ನಮಗೆಲ್ಲಾ ತಿಳಿದಿದೆ. ಕಾಲೇಜಿನ ಮೊದಲ ವರ್ಷಗಳಲ್ಲಿ ಕೈಬರಹದ ಪತ್ರಿಕೆಗಳಲ್ಲಿ ಅವನ್ನು ಪ್ರಕಟಿಸಿದರು. ಅನೇಕ ಕಥಾಸ್ಪರ್ಧೆಗಳಲ್ಲಿ ಭಾಗವಹಿಸಿ ಬಹುಮಾನಗಳನ್ನು ಪಡೆದರು. ಅವರ ಪ್ರಾರಂಭದ ಕಥೆಗಳಲ್ಲಿ ತಮ್ಮ ಜೀವನದ ಘಟನೆಗಳನ್ನು ವಸ್ತುವಾಗಿಸಿದ್ದರು. ಅನಂತರ ದಿನಗಳಲ್ಲಿ ಕಾದಂಬರಿಗಳ ಬರವಣಿಗೆ ಹೆಚ್ಚಾದವು. ವೈದ್ಯಕೀಯ ಸಂಬಂಧಿತ ಬರಹಗಳು ಮೂಡಿಬಂದವು. ಅನುಪಮಾ ಅವರ ನೆನಪು–ಸಿಹಿ–ಕಹಿಯನ್ನು ನೋಡಿದಾಗ 'ಅನುಪಮಾ' ಎಂಬ ಕಾವ್ಯನಾಮದಿಂದಲೇ ಇಂದು ಗುರುತಿಸಲ್ಪಡುತ್ತಿರುವ ವೆಂಕಟಲಕ್ಷ್ಮೀ ಕನ್ನಡ ಸಾಹಿತ್ಯದಲ್ಲಿನ ಬಹುಮುಖ್ಯ ಲೇಖಕಿ. ಇವರ ತಂದೆ ಶಿವರಾಮಯ್ಯ, ತಾಯಿ ಲಕ್ಷ್ಮೀ. ತಂದೆಯ ಹಿರಿಯ ಮಗಳಾದ ಇವರಿಗೆ ಅಜ್ಜಿ ಮತ್ತು ತಾಯಿಯ ಹೆಸರುಗಳೆರಡನ್ನೂ ಸೇರಿಸಿ ವೆಂಕಟಲಕ್ಷ್ಮೀ ಎಂದು ನಾಮಕರಣ ಮಾಡಿದರು. ವೆಂಕಟಲಕ್ಷ್ಮೀ ಚಿಕ್ಕ ವಯಸ್ಸಿನಿಂದಲೇ ಪದ್ಯ, ಸಣ್ಣಕಥೆಗಳನ್ನು ಬರೆಯುತ್ತಿದ್ದರು. ಅನುಪಮಾ ನಿರಂಜನ ಕರ್ನಾಟಕದ ಪ್ರಮುಖ ಲೇಖಕಿಯರಲ್ಲಿ ಒಬ್ಬರಾಗಿದ್ದು, ಇಪ್ಪತ್ತೆರಡು ಕಾದಂಬರಿಗಳು, ಒಂಭತ್ತು ಕಥಾಸಂಕಲನಗಳು, ಒಂದು ನಾಟಕ, ಶಿಶುಸಾಹಿತ್ಯ, ಎರಡು ಆತ್ಮಕಥನ ಎರಡು ಪ್ರವಾಸಕಥನಗಳು. ಮಹಿಳೆಯರಿಗಾಗಿ ಬರೆದ ಮೂರು ಕೃತಿಗಳು ಹಾಗೂ ಕುತೂಹಲದ ಸಂಗತಿಯೆಂದರೆ ಇವರ ತಂದೆ ಶಿವರಾಮಯ್ಯನವರು ನೇಕಾರ ವೃತ್ತಿಯನ್ನು ಅವಲಂಬಿಸಿದೆ. ವಿದ್ಯಾಕ್ಷೇತ್ರಕ್ಕೆ ಇಳಿದದ್ದು ಬಿ.ಎ> ಬಿ>ಟಿ. ಪರೀಕ್ಷೆ ಮುಗಿಸಿ ಅವರು ಸ್ಕೂಲ್ ಇನ್ಸ್‌ಪೆಕ್ಟರ್ ಆಗಿ ಕೆಲಸ ಮಾಡುತ್ತಿದ್ದರು. ಆದ್ದರಿಂದ ಇವರ ಬಾಲ್ಯವೆಲ್ಲಾ ಊರಿನಿಂದ ಮತ್ತೊಂದು ಊರಿಗೆ ಪಲಾಯನ ಮಾಡುವುದರಲ್ಲಿಯೇ ಕಳೆಯಿತು. ವೆಂಕಟಲಕ್ಷ್ಮೀಯವರಿಗೆ ಅವರ ತಂದೆಯ ತಂಗಿ ಅಕ್ಕಮ್ಮರವರಿಂದ ವೈದ್ಯಕೀಯ ತರಬೇತಿಯನ್ನು ಪಡೆಯಲು ಹಣಕಾಸಿನ ವ್ಯವಸ್ಥೆಮಾಡಿಸಿದರು. ಹಾಗೆಯೇ ಮಡಿವಂತಿಕೆಯನ್ನು ಅವರ ಮನೆಯಲ್ಲಿ ತುಂಬಾ ಪಾಲಿಸಿಕೊಂಡು ಬಂದಿದ್ದರು. ವೆಂಕಟಲಕ್ಷ್ಮೀಯವರು ಬಡತನದ ಕುಟುಂಬದಲ್ಲಿ ಬೆಳೆದುಬಂದಿದ್ದರು. ಅವರಿಗೆ ಒಂದು ಜರತಾರಿ ಲಂಗವೂ ದೊರೆಯಲಿಲ್ಲ. ತನ್ನ ಸ್ನೇಹಿತೆ ಕೊಟ್ಟಿದ್ದ

ಲಂಗದಿಂದ ಅವರು ಕಾರ್ಯಕ್ರಮವೊಂದರಲ್ಲಿ ಭಾಗವಹಿಸಿದುದೇ ಕೊನೆಯ ಲಂಗವಾಯಿತು ಎಂದು ಅವರು ಸಿಹಕಹಿಯೆಲ್ಲಿ ಹೇಳಿಕೊಂಡಿದ್ದಾರೆ.

"ಇದು ನಾವು ನೋಡುವ ಒಬ್ಬ ಮೆಡಿಕಲ್ ವಿದ್ಯಾಥಿನಿಯ ಆತ್ಮಚರಿತ್ರೆ ಮೆಡಿಕಲ್ ವಿದ್ಯಾರ್ಥಿನಿಯಾಗಿ ಸಾಹಿತ್ಯಾಸಕ್ತಿ ಬೆಳೆಸಿಕೊಂಡು, ಹಲವು ಉತ್ತಮ ಕೃತಿಗಳನ್ನು ಕೊಡುಗೆಯಾಗಿ ನೀಡಿದ ವ್ಯಕ್ತಿತ್ವ, ಮಹಿಳಾ ಸಾಹಿತಿಗಳಲ್ಲಿ ತ್ರಿವೇಣಿ, ವೀಣಾ, ಇಂದಿರಾ ಮುಂತಾದವರ ಸಾಲಿನಲ್ಲಿ ನಿಲ್ಲುವ ವ್ಯಕ್ತಿ. ಅಂದಿನ ವರುಷಗಳಲ್ಲಿಯೇ ಹಳೆಯ ಕಂದಾಚಾರಗಳನ್ನು ಧಿಕ್ಕರಿಸಿ, ಪ್ರೀತಿಸಿದವರನ್ನು ಮದುವೆಯಾಗಿ ಕ್ರಾಂತಿಕಾರಕ ಮನೋಭಾವವನ್ನು ಪ್ರದರ್ಶಿಸಿದಂತಹ, ಸಾವಿನ ಕದ ತಟ್ಟಿದರೂ ಹೊರಬಂದು ನಗುನಗುತ್ತಾ ಜೀವನ ನಡೆಸಿದ ಛಲಗಾತಿ, ಸಾಹಿತಿ, ಡಾಕ್ಟರ್, ಆಧುನಿಕ ಮಹಿಳೆಯಾಗಿ ರೂಪು ತಾಳಿದವರು ಯಾರೆಂದು ಈಗಾಗಲೇ ತಿಳಿದಿದೆ. ಅವರೆ ಅನುಪಮಾ".[೧]

ಅನುಪಮಾ ಅವರು ಆ ಕಾಲದಲ್ಲಿಯೇ ರೂಢಿ, ಸಂಪ್ರದಾಯ, ಇವುಗಳನ್ನು ಪಾಲಿಸಿಕೊಂಡು ಹೋಗುತ್ತಿದ್ದ ಆ ಕಾಲದಲ್ಲಿಯೇ ಪ್ರೇಮವಿವಾಹವನ್ನು ಮಾಡಿಕೊಂಡವರು. ಜಾತಿಪದ್ಧತಿಯನ್ನು ವಿರೋಧಿಸಿ ಅಂತರ್ಜಾತಿ ವಿವಾಹವಾಗಿ ತಂದೆ-ತಾಯಿ, ಬಂಧುಬಳಗದವರಿಂದ ದೂರವಾಗಿದ್ದರೂ ಛಲದಿಂದ ಸಾಹಿತಿಯಾಗಿ, ವೈದ್ಯೆಯಾಗಿ ಬಾಳಿ ಬದುಕಿ ತೋರಿಸಿದರು.

"ಅನುಪಮಾ ಅವರು ಮದುವೆಯ ನಂತರ ತಮ್ಮ ವೈದ್ಯಕೀಯ ಶಿಕ್ಷಣ ಮುಗಿಸಿದರು. ಸಾಹಿತಿ ನಿರಂಜನರನ್ನು ಮದುವೆಯಾದ ಮೇಲೆ ಅನುಪಮಾ ಅವರಿಗೆ ಅನೇಕ ಸಾಹಿತಿಗಳ ಪರಿಚಯವಾಯಿತು. ನಿರಂಜನರೊಂದಿಗಿನ ಬದುಕು ಅನುಪಮಾ ಅವರಿಗೆ ಸಾಕಷ್ಟು ಸಹನೆ, ಹೊಂದಾಣಿಕೆಯನ್ನು ಕಲಿಸಿಕೊಟ್ಟಿತು. ಅವರು ತಮ್ಮ ಆತ್ಮಕಥನದಲ್ಲಿ ಮಕ್ಕಳು ಹಾಗೂ ಪತಿಯ ಸಾಧನೆಯ ಬಗ್ಗೆ ತುಂಬಾ ಹೆಮ್ಮೆಯಿಂದ ಹೇಳಿಕೊಂಡಿದ್ದಾರೆ. ಕಷ್ಟದಲ್ಲಿ ಬಳಲುತ್ತಿದ್ದರೂ ಲಕ್ಷ್ಯ ಹೊಡೆದ ನಿರಂಜನರನ್ನು ಅವರು ನೋಡಿಕೊಂಡ ರೀತಿ ಅವರ ಒಲುಮೆಗೆ ಹಿಡಿದ ಕನ್ನಡಿಯಾಗಿದೆ"[೨]

ಅನುಪಮಾ ಅವರಿಗೆ ವೈದ್ಯಕೀಯ ವೃತ್ತಿಯಿಂದ ಹಾಗೂ ಸಾಹಿತ್ಯಕ ಕೃತಿಗಳ ರಚನೆಯಿಂದ ಅವರಿಗೆ ಬದುಕಿನ್ನಲ್ಲಿ ಸಾಕಷ್ಟು ತಾಳ್ಮೆ, ಸಂಯಮಗಳನ್ನು ಕಲಿತುಕೊಂಡರು ಎಂದು ಅವರೇ ಹೇಳಿಕೊಂಡಿದ್ದಾರೆ. ಅದೇ ಅಲ್ಲದೇ ಅವರ

---

೧. ಬರಹಗಾರ್ತಿಯ ಬದುಕು, ಸಿಹಿ-ಕಹಿ ಆತ್ಮಕಥನ.
೨. ಡಾ. ವಿಜಯಶ್ರೀ ಸಬರದ, ಅನುಪಮಾ ನಿರಂಜನ, ಪು. ೧೬೩.

ಗಂಡನಿಗೆ ಸ್ಟ್ರೋಕ್ ಹೊಡೆದಿದ್ದರೂ ಅದನ್ನು ತುಂಬಾ ಸಹನೆಯಿಂದ ತಮ್ಮ ಗಂಡನ ಸೇವೆ ಮಾಡಿದರು. ಅವರ ಪತಿ ನಿರಂಜನರೇ ಹೇಳುವಂತೆ ನನ್ನ ಪತ್ನಿಯಿಂದ ನನ್ನ ಜೀವ ಉಳಿಯಿತು ಎಂದು ಹೇಳಿಕೊಂಡಿದ್ದಾರೆ.

ಅನುಪಮಾ ಅವರು ಶಿಶುಸಾಹಿತ್ಯವನ್ನು ಬರೆದಿದ್ದಾರೆ. ಮಕ್ಕಳ ಸಾಹಿತ್ಯ ಮಕ್ಕಳಿಗೆ ಯಾವುದೇ ರೀತಿಯಲ್ಲೂ ಬೇಸರವಾಗದಂತೆ ಪ್ರತೀದಿನವೂ ಒಂದೊಂದು ಕಥೆಗಳನ್ನು ಓದಬೇಕು. ಈ ರೀತಿ ಕಥೆಗಳನ್ನು ಬರೀ ಎಂದು ನಿರಂಜನರು ಹೇಳಿದಾಗ ವರ್ಷಪೂರ್ತಿ ಮುಗಿಯದಂತೆ ಈ ಕಥೆಗಳನ್ನು ಅನುಪಮಾರವರು ಬರೆದಿದ್ದಾರೆ.

ಅನುಪಮಾ ಅವರ ಕಾದಂಬರಿಗಳ ಬಗ್ಗೆ ಬಂದಾಗ ಸಾಕಷ್ಟು ಕಾದಂಬರಿಗಳನ್ನು ರಚಿಸಿದ್ದಾರೆ. ಅವುಗಳನ್ನು ಒಳಹೊಕ್ಕು ನೋಡಿದಾಗ "ಶ್ವೇತಾಂಬರಿ" ಇದರಲ್ಲಿ "ರಾಧಾ" ಶ್ವೇತಾಂಬರಿ ಕಾದಂಬರಿಯ ಪ್ರಮುಖ ನಾಯಕಿ. ರಾಧಾಳಂತಹ ನರ್ಸ್ ಒಬ್ಬಳು ಒಂದು ಕಾದಂಬರಿಯ ನಾಯಕಿಯಾಗಿರುವುದು ಗಮನಿಸಬೇಕಾದ ಸಂಗತಿ. ಬಿಳಿಯ ವಸ್ತ್ರ ಧರಿಸಿ, ರೋಗಿಗಳ ಆರೈಕೆ ಮಾಡುವ ಈ ನರ್ಸ್ ವೃತ್ತಿ ತುಂಬಾ ಪವಿತ್ರವಾದುದು. ಈ ನರ್ಸ್‌ಗಳು ಕರುಣೆ, ಮಾನವೀಯತೆಯ ಸಂಕೇತವಾಗಿರಬೇಕು. ಇಂತಹ ಪವಿತ್ರ ಹುದ್ದೆ ಇಂದು ಅರ್ಥಕಳೆದುಕೊಂಡಿದೆ. ಸ್ವಚ್ಛಂದ ಪ್ರವೃತ್ತಿಯ ಅನೇಕ ಮಹಿಳೆಯರು ತಮ್ಮ ಸ್ವಾರ್ಥಲಾಲಸೆಗಳಿಗಾಗಿ ಈ ನರ್ಸ್ ವೃತ್ತಿಗೆ ಅಪಮಾನ ಮಾಡಿದ್ದಾರೆ. ನರ್ಸ್ ಎಂಬ ಪದ ಕಿವಿಗೆ ಬಿದ್ದಾಕ್ಷಣವೇ ಜನ ಮೂಗು ಮುರಿಯುತ್ತಾರೆ. ಇಂತಹ ಪವಿತ್ರ ಹುದ್ದೆಗೆ ಈ ಕೆಟ್ಟ ಹೆಸರು ಹೇಗೆ ಬರುತ್ತದೆಂಬುದನ್ನು ಈ ಕಾದಂಬರಿ ವಿಶ್ಲೇಷಿಸುತ್ತಾ, ಆಸ್ಪತ್ರೆಯ ನರ್ಸ್‌ಗಳ ವಸತಿಗೃಹದ ಆಗು-ಹೋಗುಗಳನ್ನು ದಾಖಲಿಸುತ್ತದೆ". [೧]

ಶ್ವೇತಾಂಬರಿ ಕಾದಂಬರಿಯಲ್ಲಿ ಹಿಂದೆ ಇದ್ದ ಪವಿತ್ರವಾದ ನರ್ಸ್ ಹುದ್ದೆಗೆ ಇವತ್ತು ಅಪವಿತ್ರವಾದ ಹೆಸರು ಬಂದಿದೆ. ಇವರು ರೋಗಿಗಳಿಗೆ ಶುಶ್ರೂಷೆ ಮಾಡುವುದರ ಜೊತೆಗೆ ಅವರಿಂದಲೂ ಹಣವನ್ನು ವಸೂಲು ಮಾಡುವ ಅನಿಷ್ಠ ಪದ್ಧತಿ ರೂಢಿಯಾಗಿರುವುದು ಖಂಡನೀಯ. ಆದರೆ ಅದನ್ನು ತಡೆಯುವುದು ತುಂಬಾ ಕಷ್ಟಕರವಾದುದು. ಯಾಕೆಂದರೆ ಸ್ವಲ್ಪ ದಿನಗಳವರೆವಿಗೆ ನಿಂತರೂ ಅದು ಮತ್ತೆ ಪುನಾರಂಭಗೊಳ್ಳುತ್ತದೆ.

---

೧. ಡಾ. ವಿಜಯಶ್ರೀ ಸಬರದ, ಅನುಪಮಾ ನಿರಂಜನ, ಪು. ೧೬೩.

"ಹಿಮದ ಹೂ" ನಾಯಕಿ ಪ್ರಧಾನವಾದ ಕಾದಂಬರಿಯಾಗದಿದ್ದರೂ ಇಲ್ಲಿ ಲಲಿತೆಯ ಪಾತ್ರ ಗಮನಸೆಳೆಯುತ್ತದೆ. ಇಂಗ್ಲಿಷ್ ಉಪನ್ಯಾಸಕನಾದ ಶೇಖರ, ಮಹಾರಾಣಿ ಕಾಲೇಜಿನ ಉಪನ್ಯಾಸಕಿಯಾದ ಲಲಿತೆಯನ್ನು ಮೆಚ್ಚು ಮದುವೆಯಾಗುವುದು; ಮುಂದೆ ಲಲಿತ ತನ್ನ ಕೆಲಸದ ಮೇಲೆ ನಿಷ್ಠೆ ತೋರುತ್ತಾ ಮನೆಯ ಕೆಲಸಗಳತ್ತ ದೂರವಾದಾಗ ಶೇಖರ ಕೋಪಗೊಂಡು ಅವಳು ಕೆಲಸಕ್ಕೆ ರಾಜೀನಾಮೆ ಕೊಡುವಂತೆ ಒತ್ತಾಯಿಸುವುದು. ಹೆಣ್ಣಿಗೆ ಗಂಡನ ಮನೆಯ ಮಕ್ಕಳು ಇವು ಮಾತ್ರ ಮುಖ್ಯ ಎಂದು ಲಲಿತೆಯ ಗಂಡನ ಮನೆಯವರು ತಿಳಿದಿರುವುದು. ಲಲಿತೆ ತನ್ನ ಉಪನ್ಯಾಸಕಿ ಹುದ್ದೆಗೆ ರಾಜೀನಾಮೆ ಕೊಡದೆ, ಕಾಲೇಜು ಕೆಲಸ ಮನೆಗೆಲಸಗಳೆರಡನ್ನೂ ಮಾಡಿಕೊಂಡು ಹೋಗುವುದು ಆಕೆಯ ಹೋರಾಟದ ಬದುಕಿಗೆ ಸಾಕ್ಷಿಯಂತಿವೆ".[೧]

ಲಲಿತೆಗೆ ಮನೆ ಮತ್ತು ಕಾಲೇಜಿನ ಎರಡು ಕೆಲಸಗಳನ್ನು ನಿಭಾಯಿಸಿಕೊಂಡು ಹೋಗುವ ಛಲವಿರುತ್ತದೆ. ಆದರೆ ಅದನ್ನು ನಿಭಾಯಿಸುವ ಮುನ್ನ ಕೆಲಸಗಳಲ್ಲಿ ತಡೆಯುಂಟಾದಾಗ ಗಂಡ, ಅತ್ತೆ, ಮಾವ ಇವರುಗಳು ಕೆಲಸ ಬಿಟ್ಟು ಮನೆಯ ಕೆಲಸ, ಮಕ್ಕಳು ಇವರನ್ನು ನಿರ್ವಹಿಸಿಕೊಂಡು ಹೋಗು ಎಂದಾಗ ಆಕೆ ಒಪ್ಪದೆ ಎರಡು ಕಡೆಯ ಕೆಲಸಗಳನ್ನು ದಿಟ್ಟತನದಿಂದ ನಿಭಾಯಿಸಿಕೊಂಡು ಹೋಗುತ್ತಾಳೆ. ಇದು ಇಂದಿನ ಮಹಿಳೆಯರಿಗೂ ಅನ್ವಯಿಸುವಂತೆ ಈ ಕಾದಂಬರಿ ಇದೆ.

"ಸ್ನೇಹಪಲ್ಲವಿ" ನಾಯಕಿ ಪ್ರಧಾನವಾದ ಕಾದಂಬರಿ. 'ಸರಳಾ' ಈ ಕಾದಂಬರಿಯ ಆಕರ್ಷಕ ಕೊಡುಗೆ, ಬಡತನ, ನೋವು, ಹೊಟ್ಟೆಕಿಚ್ಚು, ಜಾತೀಯತೆ ಇವುಗಳಿಂದ ಪಾರಾಗಿ, ತನ್ನ ಸಹನಶೀಲ ಗುಣದಿಂದ ಸರಳಾ ಈ ಕಾದಂಬರಿಯಲ್ಲಿ ಎತ್ತರದ ಸ್ಥಾನಕ್ಕೆ ಬೆಳೆದುನಿಲ್ಲುತ್ತಾಳೆ. ನೋಡುನೋಡುತ್ತಿದ್ದಂತೆಯೇ ಕಾದಂಬರಿಯ ನಾಯಕಿಯಾಗಿ ಪ್ರಜ್ವಲಿಸುತ್ತಾಳೆ.

ಸರಳಾ ಈ ಕಾದಂಬರಿಯಲ್ಲಿ ದ್ವೇಷವನ್ನು ಸಾಧಿಸದೇ ಎಲ್ಲರೊಂದಿಗೂ ಸಹನೆಯಿಂದ ಸರಳವಾಗಿ ಹೊಂದಿಕೊಳ್ಳುವ ಗುಣವನ್ನು ಈಕೆ ಪಡೆದುಕೊಂಡಿದ್ದಾಳೆ. ಅದೇ ರೀತಿ ಆ ಕಾಲದಲ್ಲಿಯೇ ಸರಳವಾದ ಜೀವನವನ್ನು ನಡೆಸುವುದರ ಜೊತೆಗೆ ಮನೆಯನ್ನು ಬಿಟ್ಟು ತಾನು ಪ್ರೇಮಿಸಿದ ಹುಡುಗನನ್ನು ಮದುವೆಯಾಗುವುದು ಸರಳತೆಯಿಂದಲೇ ಎಲ್ಲವನ್ನೂ ಸಾಧಿಸಬಹುದು ಎಂಬುದನ್ನು ತೋರಿಸಿದ್ದಾರೆ.

---

೧. ಡಾ. ವಿಜಯಶ್ರೀ ಸಬರದ, ಅನುಪಮಾ ನಿರಂಜನ, ಪು. ೧೬೪.

ಅನುಪಮಾ ಅವರು ಹೆಚ್ಚು ಸ್ತ್ರೀಪಾತ್ರಗಳು ಗಮನಸೆಳೆಯುವಂತೆ ಬರೆದಿದ್ದಾರೆ. ಕನ್ನಡ ಕಾದಂಬರಿ ಕ್ಷೇತ್ರ ಬರೀ ನಾಯಕ ಪ್ರಧಾನ ಕಾದಂಬರಿಗಳನ್ನೇ ಹೊಂದಿದ್ದಾಗ, ಅನುಪಮಾ ಅವರಂತಹ ಲೇಖಕಿಯರ ಪ್ರವೇಶದಿಂದ ನಾಯಕಿ ಪ್ರಧಾನ ಕಾದಂಬರಿಗಳು ಹೊರಬರಲು ಸಾಧ್ಯವಾಯಿತು. ಅವುಗಳಲ್ಲಿ "ಋಣ", "ಚಿತ್ತಮೋಹನ", "ಕಣಿವೆಗೆ ಬಂತು ಬೇಸಗೆ", 'ಪರೀಕ್ಷೆ', 'ಮಾಧವಿ', 'ನಟಿ', 'ಮಾಧವಿ', 'ಎಳೆ', 'ಕೊಳಚೆ ಕೊಂಪೆಯ ದಾನಿಗಳು' ಇನ್ನೂ ಮುಂತಾದ ಕಾದಂಬರಿಗಳನ್ನು ರಚಿಸಿದ್ದಾರೆ.

ಅನುಪಮಾ ಅವರು ವೈದ್ಯಕೀಯಕ್ಕೆ ಸಂಬಂಧಿಸಿದಂತೆ ಸಾಕಷ್ಟು ಪುಸ್ತಕಗಳನ್ನು ರಚಿಸಿದ್ದಾರೆ. ಒಂದೊಂದನ್ನು ವಿಶಿಷ್ಟವಾಗಿ ಬರೆದಿದ್ದಾರೆ. "ಕೆಂಪಮ್ಮನ ಮಗು" ಇದು ಮಗುವಿಗೆ ಸಂಬಂಧಿಸಿದ ಪುಸ್ತಕವಾಗಿದೆ. "ಆರೋಗ್ಯದರ್ಶನ" ಇದರಲ್ಲಿ "ಶರ್ಕರಪಿಷ್ಠ, ಸಸಾರಜನಕ, ಕೊಬ್ಬು, ವಿಟಮಿನ್, ಖನಿಜ ಇವನ್ನು ಒಳಗೊಂಡ ಯಾವ ಆಹಾರದ ಅಂಶ ಕಡಿಮೆಯಾದರೂ ಒಂದಲ್ಲ ಒಂದು ಕಾಯಿಲೆ ಬರಬಹುದು. ಕೊರತೆಯ ಕಾಯಿಲೆಗಳು ಒಂದೆಡೆಯಾದರೆ, ನಿಶ್ಶಕ್ತಿಯಿಂದಾಗಿ ವ್ಯಕ್ತಿ ಇತರ ತೀವ್ರ ಸೋಂಕು ರೋಗುಗಳಿಗೆ ಸುಲಭವಾಗಿ ಈಡಾಗುವ ಸಾಧ್ಯತೆ ಇದೆ. ಸಮತೋಲನ ಆಹಾರ ಸೇವನೆಯಿಂದ ಮಾತ್ರ ಈ ಪಿಡುಗುಗಳನ್ನೆಲ್ಲಾ ದೂರವಿಡುವುದು ಸಾಧ್ಯ. ಆರೋಗ್ಯವಾಗಿರುವಾಗ ಆಹಾರ ಸೇವನೆಯು ಸೂಕ್ತನಿಯಮ ಪಾಲಿಸುವ ಹಾಗೆ ಅನಾರೋಗ್ಯವಾದಾಗ ರೋಗಗಳಲ್ಲಿ ಇಂಥ ಪಥ್ಯ ಮಾಡುವುದರ ಮುಖಾಂತರ ರೋಗವನ್ನು ಬಲುಬೇಗನೇ ಹತೋಟಿಗೆ ತರಬಹುದು. ಹೀಗೆ ಆರೋಗ್ಯ – ಅನಾರೋಗ್ಯಗಳೆರಡೂ ಸ್ಥಿತಿಯಲ್ಲಿ ಆಹಾರದ ಬಗ್ಗೆ ಹೆಚ್ಚು ನಿಗಾ ಕೊಡಬೇಕು"[೧] ಆರೋಗ್ಯವನ್ನು ಕಾಪಾಡಿಕೊಳ್ಳುವುದಕ್ಕೆ ಸರಿಯಾದ ಸಮಯಕ್ಕೆ ಆಹಾರಪದಾರ್ಥಗಳನ್ನು ತೆಗೆದುಕೊಂಡರೆ ಯಾವ ರೋಗಗಳು ದೇಹಕ್ಕೆ ಬರುವುದಿಲ್ಲ ಎಂದು ಅನುಪಮಾ ಅವರು ಆಹಾರದಿಂದ ಆರೋಗ್ಯ ಎಂಬ ಪುಸ್ತಕವನ್ನು ಬರೆದಿದ್ದಾರೆ.

"ಶಿಶುವೈದ್ಯ ದೀಪಿಕೆ"ಯಲ್ಲಿ ಒಂದು ಪುಟ್ಟ ಸಂಸಾರ, ತಂದೆ–ತಾಯಿಯರಿಗೆ ಇಬ್ಬರು ಮಕ್ಕಳು. ತುಂಬಾ ಆತ್ಮೀಯವಾಗಿ ಒಬ್ಬರಿಗೊಬ್ಬರು ಒತ್ತಾಸೆಯಾಗಿ ಬೆಳೆದ ಇಂಥ ಕುಟುಂಬಗಳಲ್ಲಿ ಅಗಲಿಕೆ ತುಂಬಾ ನೋವು ತರುವ ಅಂಶ. ಆದರೆ ಜೀವನದಲ್ಲಿ ಅಗಲಿಕೆ ಒಂದಲ್ಲ ಒಂದು ಸಂದರ್ಭದಲ್ಲಿ ಬರುವಂಥದೇ. ಇಂಥ

---

೧. ಆಹಾರದಿಂದ ಆರೋಗ್ಯ, ಅನುಪಮಾ ನಿರಂಜನ, ಪು. ೧೩.

ಅಗಲಿಕೆ ತಾತ್ಕಾಲಿಕವಾಗಿರಬಹುದು. ಶಾಶ್ವತರೀತಿಯದೂ ಆಗಬಹುದು. ಈ ಸಮಯಗಳಲ್ಲಿ ಮಗು ಯಾವ ರೀತಿ ಪ್ರತಿಕ್ರಿಯೆ ವ್ಯಕ್ತಪಡಿಸುತ್ತಾನೆ ಎಂಬುದು ಅಧ್ಯಯನ ಯೋಗ್ಯ, ಇದನ್ನು ಸೂಕ್ತ ರೀತಿಯಲ್ಲಿ ಎದುರಿಸಲು ಮಗುವಿಗೆ ಮಾರ್ಗದರ್ಶನವೂ ಅಗತ್ಯ".[೧]

ಅನುಪಮಾ ಅವರು ಇದನ್ನು ತುಂಬಾ ಸೊಗಸಾಗಿ ಹೇಳಿದ್ದಾರೆ. ಮಗು ದೊಡ್ಡವನಾಗುವವರೆವಿಗೆ ತಂದೆ, ತಾಯಿ ಇವರು ಕೆಲಸಕ್ಕೆ ಹೋಗುವಾಗ ಎಲ್ಲಿ ಬಿಟ್ಟುಹೋಗುವುದು ಎಂದು ಚಿಂತಿಸಿ ಮಗುವನ್ನು ಪ್ಲೇ ಹೋಂಗೆ ಬಿಟ್ಟು ಹೋಗುವುದೇ ಅಥವಾ ತಾತ, ಅಜ್ಜಿ ಇವರ ಜೊತೆ ಬಿಟ್ಟುಹೋಗುವುದೇ ಎಂದು ಯೋಚಿಸಿ ಪ್ಲೇ ಹೋಂನಲ್ಲಿ ಬಿಟ್ಟು ನೌಕರಿಗೆ ಹೋಗುತ್ತಾರೆ. ಅವರು ಕೆಲಸ ಮುಗಿಸಿ ಬರುವವರೆಗೆ ಅಗಲಿಕೆ ಮಗುವಿಗೂ, ತಾಯಂದಿರಿಗೂ ಇದು ಅನಿವಾರ್ಯ. ಇದನ್ನು ಸಂದರ್ಭಕ್ಕೆ ಅನುಸಾರವಾಗಿಯೂ ಮಾಡಬೇಕಾಗುತ್ತದೆ. ಒಂದೆರಡು ದಿನಗಳ ಬಳಿಕ, "ಅಮ್ಮ ಅಪ್ಪ ಯಾವಾಗ ವಾಪಾಸ್ ಬರುತ್ತಾರೆ? ನನ್ನನ್ನು ಯಾಕೆ ಬಿಟ್ಟು ಹೋದರು ಎಂದು ಆ ಮಗುವಿನ ಮುಗ್ಧ ಮನಸ್ಸಿನಲ್ಲಿ ಮೂಡುವುದು ಅನಿವಾರ್ಯ.

"ಕ್ಯಾನ್ಸರ್ ಜಗತ್ತು" ಇದರಲ್ಲಿ ಸಾಮಾನ್ಯವಾಗಿ ಸ್ನೇಹಿತರಿಗೋ, ಬಂಧುಗಳಿಗೋ, ಕಾಯಿಲೆಯಾದಾಗ ಅವರನ್ನು ಕಂಡು ನಾಲ್ಕು ಸಾಂತ್ವನದ ಮಾತು ಆಡಿಬರುವುದು ವಾಡಿಕೆ. ಆದರೆ ಕ್ಯಾನ್ಸರ್ ರೋಗಿಗಳ ಬಳಿ ಹೋಗಲು ಎಲ್ಲರೂ ಹೆದರುತ್ತಾರೆ. ಅವರ ಬಳಿ ಕೂತರೆ, ಮಾತಾಡಿದರೆ ತಮಗೂ ರೋಗ ಎಲ್ಲಿ ಅಂಟುವುದೋ ಎಂಬ ಭಯ ಬಹಳ ಮಂದಿಯನ್ನು ಕಾಡುತ್ತವೆ. ನಿಜವಾಗಿ ಹೇಳುವುದಾದರೆ ಕ್ಯಾನ್ಸರ್ ಅಂಟುರೋಗವಲ್ಲ. ಅದು ಒಬ್ಬರಿಂದ ಒಬ್ಬರಿಗೆ ಹರಡುವ ಕಾಯಿಲೆಯೂ ಅಲ್ಲ. ಈ ತಿಳುವಳಿಕೆ ಜನಸಾಮಾನ್ಯರಿಗಿದ್ದರೆ ಕ್ಯಾನ್ಸರ್ ರೋಗಿಗಳ ಬಗ್ಗೆ ಅವರಿಗಿರುವ ದೃಷ್ಟಿಕೋನ ಬದಲಾಗಿ, ಅವರು ಹೆಚ್ಚು ಪ್ರೀತಿ ಅನುಕಂಪಗಳಿಂದ ವರ್ತಿಸಬಲ್ಲರು".

ಕ್ಯಾನ್ಸರ್ ಎಂದರೆ ಆಗಿನ ಕಾಲದಲ್ಲಿ ಸಾವು ಎನ್ನುವ ಕಾಲ ತುಂಬಾ ಪ್ರಬಲವಾಗಿತ್ತು. ಆದರೆ ಈಗಿನ ವೈದ್ಯಕೀಯ ಚಿಕಿತ್ಸೆಯಿಂದ ಮುಂದುವರೆದು ಆರಂಭಿಕ ಹಂತದಲ್ಲೇ ರೋಗವನ್ನು ಪತ್ತೆಹಚ್ಚಿ ಅದನ್ನು ಗುಣಪಡಿಸುವ ವ್ಯವಸ್ಥೆ ಬಂದಿರುವುದರಿಂದ ಕ್ಯಾನ್ಸರ್ ಎಂದರೆ ಹೆದರುವ ಅವಶ್ಯಕತೆಯಿಲ್ಲ ಎಂಬುದನ್ನು ಅನುಪಮಾ ಅವರು ವೈದ್ಯಕೀಯ ಪುಸ್ತಕವನ್ನು ಬರೆದು ತೋರಿಸಿದ್ದಾರೆ. ಅದೇ ರೀತಿ

---

೧. ಶಿಶುವೈದ್ಯ ದೀಪಿಕೆ, ಪು. ೩೯.

ಒತ್ತಡದ ಬೇನೆಗಳು ಪುಸ್ತಕದಲ್ಲಿ ಇವತ್ತಿನ ದಿನದಲ್ಲಿ ಸಾಕಷ್ಟು ಮುಂದುವರೆದಿರುವ ವೈಜ್ಞಾನಿಕ ತಂತ್ರಜ್ಞಾನದಿಂದ ಮನುಷ್ಯನ ಮನೋಸ್ಥಿತಿಯು ಹಲವಾರು ದ್ವಂದ್ವಗಳಿಂದ ಸಾಕಷ್ಟು ರೋಗಗಳಿಗೆ ಗುರಿಯಾಗುತ್ತಿದ್ದಾರೆ. ಹೃದಯ ಕ್ಯಾನ್ಸರ್, ಬಿ.ಪಿ., ಶುಗರ್ ಇವುಗಳಿಗೆಲ್ಲಾ ಆಹ್ವಾನವಿಟ್ಟಂತೆ ಆಗುತ್ತಿದೆ. ಆದುದರಿಂದ ಯಾವುದೇ ಕೆಲಸಗಳನ್ನು ತುಂಬಾ ತಾಳ್ಮೆಯಿಂದ, ಸಹನೆಯಿಂದ ಕರ್ತವ್ಯಗಳನ್ನು ನಿರ್ವಹಿಸುವುದರಿಂದ ಆಗುವ ತೊಂದರೆಗಳನ್ನು ನಿಭಯಿಸಬಹುದು. ಬೇಗ ಸಾವು ಸಂಭವಿಸುವುದನ್ನು ತಡೆಯಬಹುದು ಎಂದು ತಿಳಿಸಿದ್ದಾರೆ.

ಅನುಪಮಾ ಅವರು ವೈದ್ಯಕೀಯದಲ್ಲಿ "ತಾಯಿ–ಮಗು" ಎಂಬ ಪುಸ್ತಕವನ್ನು ಬರೆದಿದ್ದಾರೆ. ಮಗುವಿಗೆ ತಾಯಿಯ ಹಾಲೇ ಅತ್ಯಂತ ಪುಷ್ಟಿದಾಯಕವೂ ಆರೋಗ್ಯಕರ ಆದುದೂ ಆಗಿದೆ. ಆದುದರಿಂದ ನಿಮ್ಮ ಮಗುವಿಗೆ ಹಾಲು ಕುಡಿಸುವ ಸಂದರ್ಭ ಬಂದಾಗ, ನೀವು ಸ್ವಲ್ಪವೂ ಹಿಂಜರಿಯಬಾರದು. ಮಗುವಿಗೆ ಹಾಲು ಕುಡಿಸುವುದು ತುಂಬಾ ಸುಲಭದ ಕೆಲಸ. ಆದರೆ ನೀವು ಹೆದರಿದರೆ ಇದು ಕಷ್ಟಕರವಾಗಿಯೂ ಪರಿಣಮಿಸಬಹುದು".

"ನೀವು ಚೊಚ್ಚಲ ತಾಯಿ. ಹಾಲು ಕುಡಿಸಲು ನಿಮಗೆ ತವಕ> ಆದರೆ ಯಾರಾದರೂ ನೋಡಿಯಾರೆಂಬ ನಾಚಿಕೆ, ಸಂಕೋಚ. ಆದುದರಿಂದ ನೀವು ಮಗುವಿಗೆ ಹಾಲು ಕುಡಿಸುವಾಗ ಬೇರೆಯವರು ಇರದಿದ್ದರೆ ಒಳಿತು".

ಮಗುವಿಗೆ ತಾಯಿಯ ಹಾಲೇ ಅಮೃತ. ಅದನ್ನು ಬಿಟ್ಟು ಬೇರೆ ಹಾಲನ್ನು ಆರು ತಿಂಗಳು ಆಗುವ ತನಕ ಕುಡಿಸುವ ಹಾಗಿಲ್ಲ. ಅದರ ಜೊತೆಗೆ ತಾಯಿಯಾದವಳು ಮಗುವಿಗೆ ಹಾಲುಡಿಸುವಾಗ ಎಲ್ಲರೆದುರು ಕುಡಿಸುವುದು ತಪ್ಪು. ಯಾಕೆಂದರೆ ಜನರ ಗದ್ದಲ ಶಬ್ದಗಳಿಂದ ಮಗು ಹಾಲು ಕುಡಿಯದೇ ಹೋಗಬಹುದು. ಹಾಗಾಗಿ ನಿಶಬ್ಧವಾದ ಸ್ಥಳದಲ್ಲಿ ಹಾಲು ಕುಡಿಸುವುದು ಒಳಿತು. ಈ ತಾಯಿಯ ಹಾಲು ಕುಡಿದ ಮಗು ಯಾವುದೇ ಕಾಯಿಲೆಗಳಿಗೂ ಬೇಗ ತುತ್ತಾಗುವುದಿಲ್ಲ. ರೋಗ ನಿರೋಧಕ ಶಕ್ತಿಹೆಚ್ಚಿರುವುದರಿಂದ ತಾಯಿಯ ಹಾಲು ಅಮೃತ ಎಂದು ಹೇಳಿದ್ದಾರೆ.

"ದಾಂಪತ್ಯ ದೀಪಕೆ"ಯಲ್ಲಿ ಮದುವೆಯಾದ ಮೊದಲ ದಿನಗಳಲ್ಲಿ ಗಂಡಿಗೆ ಹೆಣ್ಣಿನ ಒಲವನ್ನು ಗಳಿಸಿಕೊಳ್ಳುವ ಕಾರ್ಯ ಸುಲಭವೇನಲ್ಲ. ಹೆಣ್ಣು ಮಡಿವಂತರ ಮನೆಯಲ್ಲಿ ಹುಟ್ಟಿ ಬೆಳೆದ ನಾಚಿಕೆಯ ಮುಗ್ಧೆಯಾದರೆ ಅವಳನ್ನು ಪ್ರೇಮಿಯನ್ನಾಗಿ

ಮಾಡಲು ಗಂಡು ತನ್ನ ಬುದ್ಧಿಯನ್ನೆಲ್ಲಾ ಉಪಯೋಗಿಸುತ್ತಾನೆ. ಆತ ಒರಟಾಗಿ ವರ್ತಿಸಿದನೋ ಅವರ ವೈವಾಹಿಕ ಜೀವನವೇ ಮುರಿದುಬೀಳುವ ಅಪಾಯವಿದೆ".

ಮದುವೆಯಾದ ಮೇಲೆ ಗಂಡ ಹೆಂಡತಿ ಇಬ್ಬರಿಗೂ ಒಂದು ರೀತಿಯ ನಾಚಿಕೆ, ಸಂಕೋಚ ಇದೆಲ್ಲಾ ಸಾಮಾನ್ಯವಾಗಿ ಇದ್ದೇ ಇರುತ್ತದೆ. ಆದರೆ ಇವರಿಬ್ಬರ ದಾಂಪತ್ಯವೂ ಹಾಗೆಯೇ ಒಬ್ಬರನ್ನೊಬ್ಬರು ಪರಸ್ಪರ ಅರ್ಥಮಾಡಿಕೊಳ್ಳುವುದು ಸುಮಾರು ದಿನಗಳೇ ಆಗಬಹುದು. ಆದುದರಿಂದ ಗಂಡಿಗೆ ತನ್ನ ಹೆಂಡತಿಯ ಒಲವನ್ನು ಗಳಿಸಿಕೊಳ್ಳುವ ತನಕ ಸಂಯಮವನ್ನು ತಳೆಯುವುದು ಒಳ್ಳೆಯದು.

"ಪ್ರವಾಸ ಮತ್ತು ಆತ್ಮಕಥನಕ್ಕೆ ಸಂಬಂಧಿಸಿದಂತೆ ತಿಳಿಯಲು ಹೋದಾಗ ಪ್ರವಾಸ ಮಾಡುವುದು ಬಹಳ ಸ್ಫೂರ್ತಿದಾಯಕ, ಸಂತೋಷದಾಯಕ, ಜ್ಞಾನದಾಯಕವೂ ಹೌದು. ಅದೊಂದು ವಿಶಿಷ್ಟ ಅನುಭವವನ್ನು ನೀಡುತ್ತದೆ. ಬೇರೊಂದು ಸಾಂಸ್ಕೃತಿಕ, ಭೌಗೋಳಿಕ ಸಾಮಾಜಿಕ ಪರಿಸರವನ್ನು ನೋಡುವುದೂ ಬೇರೊಂದು ಸಂಗತಿಯನ್ನು ತಿಳಿಯುವುದು ಯಾವಾಗಲೂ ಕುತೂಹಲಕಾರಿ ಅಂಶ. ಪಾಶ್ಚಿಮಾತ್ಯ ದೇಶಗಳ ಜನರು ಪ್ರವಾಸ ಮಾಡುವುದರಲ್ಲಿ ಯಾವಾಗಲೂ ಮುಂದಿದ್ದಾರೆ. ಬಹಳ ಹಿಂದಿನಿಂದಲೂ ಈ ಪ್ರಪಂಚ ಪರ್ಯಟನವು ಜಾರಿಯಲ್ಲಿದೆ. ಪ್ರಾಯಶಃ ಈ ಪರ್ಯಟನೆಯಿಂದಲೇ ನಾಗರೀಕತೆಯ, ಸಂಸ್ಕೃತಿಯು ಜನಸಂಪರ್ಕವೂ ಆಯಿತೆನ್ನಬಹುದು".[೧]

ಭಾರತದಂತಹ ದೇಶಗಳಲ್ಲಿ ಹೆಚ್ಚಾಗಿ ಹೊರ ಹೋಗುವವರು ತುಂಬಾ ಕಡಿಮೆಯೇ. ಯಾಕೆಂದರೆ ನಮ್ಮ ಜನತೆಗೆ ರಂಜನೀಯವಾದ ಸ್ಥಳಗಳನ್ನು ನೋಡುವ, ಅನುಭವಿಸುವ ಕುತೂಹಲ ಕಡಿಮೆ. ಯಾವುದೋ ಕೆಲಸದ ನಿಮಿತ್ತ ಹೋಗುವಾಗ ಅದನ್ನು ನೋಡುತ್ತಾರೆ. ಆದರೆ ಪಾಶ್ಚಾಮಾತ್ಯ ದೇಶಗಳಲ್ಲಿ ಪ್ರವಾಸಕೈಗೊಳ್ಳುವುದು. ಅಲ್ಲಿನ ಜನರಿಗೆ ಒಂದು ರೀತಿ ಶೋಧನೆ ಮಾಡಿದಂತೆ ಆಗುತ್ತದೆ.

ಅದರ ಜೊತೆಗೆಯೇ 'ಸ್ನೇಹಯಾತ್ರೆ', "ಅಂಗೈಯಲ್ಲಿ ಯುರೋ ಅಮೇರಿಕ", 'ವನಿತಾವಾಣಿ, 'ಶುಭಕಾಮನೆ', 'ಮಾನಿನಿ' ಇನ್ನೂ ಮುಂತಾದವು ಅವರ ಪ್ರವಾಸಕಥನದಲ್ಲಿ ಸಂಬಂಧಿಸಿದವು ಆಗಿವೆ. ಹಾಗೆಯೇ 'ದಾಂಪತ್ಯ ಕಲೆವಿಜ್ಞಾನ', 'ದಾಂಪತ್ಯ ದೀಪಿಕೆ', 'ವಧುವಿಗೆ ಕಿವಿಮಾತು' ವಧುವಾದವಳು ಮದುವೆಯಾಗುವ ಗಂಡಿನ ಬಗ್ಗೆ ಅವಳು ಕೇಳುವ ಕಾಣುವ ಕನಸುಗಳು ತುಂಬಾ ವಿನೋದವಾದವುಗಳೇ

---

೧. ಬರಹಗಾರ್ತಿಯ ಬದುಕು, ಪು. ೩೦.

ಆಗಿವೆ. ಅಂದರೆ ಆಕೆಗೆ ಗಂಡನ ಮನೆಗೆ ಹೋಗುವ ಹೆಣ್ಣು ತನ್ನ ಬಗ್ಗೆ ಏನೆಲ್ಲಾ ತಿಳಿದುಕೊಳ್ಳಬೇಕೊ ಅದನ್ನು ತಾಯಿಯಿಂದ, ಅಥವಾ ವೈದ್ಯರಿಂದ ಅಥವಾ ತನ್ನ ಸ್ನೇಹಿತೆಯರಿಂದ ಹೆಣ್ಣಿನ ಹೆಣ್ತನದ ಬಗ್ಗೆ ತಿಳಿದುಕೊಳ್ಳುವುದು ಮೊದಲು ತಿಳಿದುಕೊಳ್ಳಬೇಕು. ಅನಂತರ ಗಂಡಿನ ಮನೆಗೆ ಹೋದಾಗ ಆತನ ಜೊತೆಗೆ ಹಾಗೂ ಅತ್ತೆ-ಮಾವಂದಿರ ಬಗ್ಗೆ ಸಂಪೂರ್ಣವಾಗಿ ಹೊಂದಿಕೊಳ್ಳುವ ಬಗ್ಗೆ ಸರಿಯಾಗಿ ತಿಳಿದುಕೊಂಡಾಗ ವಧುವಿನ ಬದುಕು ತುಂಬಾ ಚೆನ್ನಾಗಿರುತ್ತದೆ. ಇಲ್ಲದಿದ್ದರೆ ಅರ್ಧಂಬರ್ಧದ ತಿಳುವಳಿಕೆಯಿಂದ ಬಾಳಲ್ಲಿ ಕೊನೆಯವರೆವಿಗೂ ಕಣ್ಣೀರಿನಿಂದ ಜೀವನ ಸಾಗಿಸಬೇಕಾಗುತ್ತದೆ ಎಂಬುದನ್ನು ಅನುಪಮಾ ಅವರು ವಧುವಿಗೆ ಕಿವಿಮಾತು ಎಂಬ ಪುಸ್ತಕದಲ್ಲಿ ವಿವರವಾಗಿ ತಿಳಿಸಿದ್ದಾರೆ. ಅದೇ ರೀತಿ ದಾಂಪತ್ಯ ದೀಪಿಕೆ ಗಂಡ-ಹೆಂಡತಿಯ ಸಮಾಗಮ ಹೆಣ್ಣಿನ ದೇಹರಚನೆ, ಗರ್ಭಾಶಯದ ರಚನೆ, ಏರುಪೇರಿನಿಂದಾಗಿ ಉಂಟಾಗುವ ತೊಂದರೆಗಳು, ಗರ್ಭವತಿಯಾಗುವುದಕ್ಕೆ ಏನೆಲ್ಲಾ ಅಂಶಗಳು ಪರಿಪಕ್ವತೆ ಹೊಂದಿರಬೇಕು, ಮಗು ಗರ್ಭದಲ್ಲಿ ಹೇಗೆ ರಚನೆಯಾಗುತ್ತದೆ. ಇದಕ್ಕೆ ಗಂಡಿನ ವೀರ್ಯಾಣು, ಹೆಣ್ಣಿನ ಅಂಡಾನುಗಳ ಕಾರ್ಯ ಏನು ಎಂಬುದನ್ನು ಸವಿಸ್ತಾರವಾಗಿ ಅನುಪಮಾ ಅವರು ದಾಂಪತ್ಯ ದೀಪಿಕೆಯಲ್ಲಿ ಬರೆದಿದ್ದಾರೆ.[೧]

"ಅನುಪಮಾ ಅವರ ಕಥಾಸಾಹಿತ್ಯವು ವಾಸ್ತವಿಕತೆಯ ಕ್ರೂರ ಮುಖವನ್ನು ಪ್ರತಿಬಿಂಬಿಸುತ್ತವೆ. ಹಾಗೆಯೇ ನಾಳಿನ ಒಳಿತನ್ನು ಆಸೆಯಾಗಿ ಇಟ್ಟುಕೊಂಡಿರುತ್ತದೆ. ಇವರ ಕಥೆಗಳಲ್ಲಿ ಪ್ರಮುಖವಾಗಿ ಶೋಷಣೆ ಮತ್ತು ಲಿಂಗವ್ಯವಸ್ಥೆಯ ಅಸಮಾನತೆಗಳು ಪ್ರಮುಖ ವಸ್ತುಗಳಾಗಿವೆ. ಇದಕ್ಕೆ ಹೊರತಾಗಿ ಹಲವು ಮಾನಸಿಕ ಸಮಸ್ಯೆಗಳನ್ನು ಮನುಷ್ಯನ ವರ್ತನೆ - ನಂಬಿಕೆಯ ಸಮಸ್ಯೆಗಳನ್ನು ಆಯ್ದುಕೊಂಡಿದ್ದಾರೆ".

ಅನುಪಮಾ ಅವರ ಕಥೆಯಲ್ಲಿ ಸಾಮಾನ್ಯವಾಗಿ ಕೆಟ್ಟ ವರ್ತನೆಗಳು ಹಾಗೂ ಹೆಣ್ಣು ಗಂಡಿನ ತುಳಿತಕ್ಕೆ ಒಳಗಾಗಿ ಅವಳು ಪಡುವ ಮಾನಸಿಕವಾದ ಯಾತನೆಯನ್ನು ಈ ಕಥೆಯಲ್ಲಿ ಪ್ರತಿಬಿಂಬಿತವಾಗಿದೆ. ಇದರ ಜೊತೆಗೆ ಮನುಷ್ಯ ಮನುಷ್ಯರ ನಡುವೆ ಯಾವ ರೀತಿಯಲ್ಲಿ ನಂಬಿಕೆಯು ಸಮಸ್ಯೆಗಳನ್ನು ಹಾಗೂ ಪರಿಹಾರಗಳನ್ನು ಪಡೆಯುವುದು ಇದನ್ನು ಅವರು ತಿಳಿಸಿದ್ದಾರೆ.

"ಕಣ್ಮಣಿಯಲ್ಲಿ ಕೆಳವರ್ಗದವರ ನೋವು, ಅಸಹಾಯಕತೆ, ಸರಳತೆಗಳು ಬಡತನ ಇವೆಲ್ಲಾ ಢಾಳಾಗಿ ಕಾಣುತ್ತವೆ. ಇತರ ಕಥೆಗಳಲ್ಲಿ ಬಡವರೆಲ್ಲಾ ಒಳ್ಳೆಯವರು,

---

೧. ದಾಂಪತ್ಯ ದೀಪಿಕೆ, ಪು. ೫೮.

ಅಸಹಾಯಕರು ಅವರ ಬದುಕು ಬರೇ ನೋವಿನಿಂದ ತುಂಬಿರುತ್ತದೆ. ಮೇಲುವರ್ಗಗಳು ಯಾವಾಗಲೂ ಅವರನ್ನು ಶೋಷಿಸುತ್ತವೆ ಎಂಬಂಥ ಸಿದ್ಧಸೂತ್ರಗಳು, ಸಿದ್ಧ ಮಾದರಿಗಳು ಕಥೆಗೆ ದೊರಕಿ ಏಕತಾನತೆ, ಪುನರಾವರ್ತನೆ ಸರಳತೆಯನ್ನು ಮೈಗೂಡಿಸಿಕೊಳ್ಳುತ್ತವೆ. ಅನುಪಮಾ ಅವರು ಮೊದಲಿಗೆ ಹೀಗೆ ಬಡತನವನ್ನು ಯಥಾವತ್ತಾಗಿ ಚಿತ್ರಿಸಿರುವ ಅನುಪಮಾ ಅನುಭವ ಪಕ್ವವಾಗುತ್ತಿದ್ದಂತೆ ಬಡತನವನ್ನು ಕಾಣುವ ದೃಷ್ಟಿಯನ್ನು ಬದಲಿಸಿಕೊಂಡರು".

ಕಣ್ಮಣಿ ಕಥೆಯಲ್ಲಿ ಬಡವರು ಅಸಹಾಯಕರು ಬಡತನದಿಂದ ಇವರ ಜೀವನ ತತ್ತರಿಸಿ ಹೋಗಿರುತ್ತದೆ. ಇದನ್ನು ಧಾಳವಾಗಿ ಬಳಸಿಕೊಂಡು ಉಳ್ಳವರು ಇವರು ಮನಬಂದಂತೆ ಬಳಸಿಕೊಳ್ಳುವುದಲ್ಲದೆ, ಅವರ ಇಷ್ಟದಂತೆಯೇ ನಡೆದುಕೊಳ್ಳುವಂತಹ ಪರಿಸ್ಥಿತಿ ಇವರಿಗೆ ಬರುತ್ತದೆ. ಇದನ್ನು ಅನುಪಮಾ ಅವರು ಬಡತನವೇ ಮನುಷ್ಯನನ್ನು ಎಂತಹ ಹೀನ ಸ್ಥಿತಿಗಾದರೂ ತಳ್ಳುತ್ತದೆ ಎಂದು ತಿಳಿಸಿದ್ದಾರೆ.

ಮೊದಲ ಸಂಕಲನದಲ್ಲಿ ಬರುವ "ಮಣ್ಣು ದಿಬ್ಬದ ಮೇಲೆ" ಎಂಬ ಕಥೆಯು ಬಡವರ ಪರವಾದ ಧೋರಣೆಯನ್ನು ಅನುಪಮಾ ಹೊಂದಿರುವುದು ಸ್ಪಷ್ಟಪಡಿಸುತ್ತದೆ. ಅದು ಮಕ್ಕಳ ಮೂಲಕ ಅಭಿವ್ಯಕ್ತಗೊಂಡಿರುವುದು ಮನಸ್ಸಲ್ಲಿ ಕಥೆ ಮಿಡಿಯುತ್ತದೆ. 'ಕಪ್ಪು-ಬಿಳುಪು', 'ಮಣ್ಣು' ಮುಂತಾದ ಅನೇಕ ಕಥೆಗಳಲ್ಲಿ ಈ ಬಡತನದ ಛಾಯೆಯನ್ನು ಗುರುತಿಸಬಹುದು. ಮಣ್ಣುದಿಬ್ಬದ ಮೇಲೆ ಕಥೆಯಲ್ಲಿ ಅಣ್ಣ-ತಂಗಿಯರು ರಂಗೋಲಿಯನ್ನು ಅಗೆದು, ಹೊತ್ತು, ಮುರಿಹೊಟ್ಟೆ ತುಂಬಿಸಿಕೊಳ್ಳಲು ಯತ್ನಿಸುತ್ತಾರೆ. ಒಮ್ಮೆ ಏನು ಸಿಗದಿದ್ದಾಗ ಸಿಕ್ಕ ಸ್ವಲ್ಪ ಅನ್ನವನ್ನೆ ತಿನ್ನುತ್ತಾರೆ".

ಈ ಮಣ್ಣು ದಿಬ್ಬದ ಮೇಲೆ ಕಥೆಯಲ್ಲಿ ಬಡತನವೇ ಒಂದು ಕಾರಣವೆಂಬುದು ಮಾತ್ರವಲ್ಲದೇ ಸಿಕ್ಕಿರುವ ಅಲ್ಪ ಸ್ವಲ್ಪ ಅನ್ನವನ್ನು ತಿಂದು ಮಲಗುವ ಸ್ಥಿತಿ ಬಂದಿರುತ್ತದೆ. ಆದರೆ ತಂದೆಯಿಂದ ಯಾಕೆ ಹೆಚ್ಚಿಗೆ ಅನ್ನ ತರಲು ನಿಮ್ಮಿಂದಾಗಲಿಲ್ಲ ಎಂದು ಇವರಿಬ್ಬರು ಮಕ್ಕಳಿಗೂ ಒಡೆತ ಬಿದ್ದಾಗ ಒಂದು ರೀತಿಯ ಧಾರುಣಸ್ಥಿತಿ ಇಲ್ಲಿ ಕಂಡುಬರುತ್ತದೆ. ಅದೂ ಅಲ್ಲದೇ ಇವರ ಮನೆ ಮಣ್ಣಿನ ಮನೆಯಾಗಿದೆ. ಇದು ಮಳೆಯ ಆರ್ಭಟಕ್ಕೆ ಕುಸಿದು ಹೋದಾಗ ಅಲ್ಲಿನ ಜನರೇ ಕಟ್ಟಿಕೊಟ್ಟಿರುತ್ತಾರೆ. ಆದರೆ ಆ ಮನೆಯು ಇವರಿಗೆ ದಕ್ಕುವುದಿಲ್ಲ. ಯಾಕೆಂದರೆ ಆ ಊರಿನ ಸಾಹುಕಾರ ಅದು ನನ್ನ ಜಾಗ ಬೇಗ ಖಾಲಿ ಮಾಡು ಎಂದು ಆಜ್ಞೆ ಮಾಡುವುದು ಒಂದು ರೀತಿಯ ಬಡತನವೇ ಕಾರಣ. "ಆರೋಗ್ಯವೇ ಭಾಗ್ಯ" ಎನ್ನುವುದು ಎಲ್ಲರೂ ಒಪ್ಪುವ ಸಂಗತಿ, ಅನುಪಮಾ ಅವರು ರೋಗಿಗಳನ್ನು, ಮುಪ್ಪು ಬಂದವರನ್ನು ತೀರಾ ಹತ್ತಿರದಿಂದ

ಕಂಡವರು. ಆಸ್ಪತ್ರೆಗಳಲ್ಲಿ ಬರುವ ಸಂಬಂಧಿಕರ, ಮನೆಯವರ ಒಡನಾಟಗಳು, ಮನಸ್ಸುಗಳು ಹೇಗಿರುತ್ತದೆಂದು ಬಲ್ಲವರು, ತಮ್ಮ ಒಟ್ಟಾರೆ ಅನುಭವಗಳನ್ನು ತಮ್ಮ ಕಥೆಗಳಲ್ಲಿ ಬಿಡಿಸಿದ್ದಾರೆ. "ದಾಹ", "ಮೌನ", ಅಂಥೆರಡು ಕಥೆಗಳು 'ದಾಹ'ದಲ್ಲಿಯ ಕಥಾನಾಯಕಿ, ರೋಗಿಯ ಹತಾಶೆ, ಬದುಕಿಗಾಗಿ ಜಗ್ಗುವ ಹೋರಾಟ ಇವೆಲ್ಲಾ ರೋಗಿಗಳ ಒಳಜಗತ್ತಿನ ಅರಿವನ್ನು ಮೂಡಿಸುತ್ತದೆ. ಕುಟುಂಬದಲ್ಲಿ ಅವರ ಸ್ಥಾನಮಾನ, ಕುಟುಂಬಕ್ಕಾಗಿ ಮಾಡಿದ ಉಪಕಾರ, ಸೇವೆಗಳು ಅನಂತರದಲ್ಲಿ ಗೌಣವಾಗುತ್ತಾ ಬರುತ್ತದೆ".

ಅನುಪಮಾ ಅವರು ವೈದ್ಯಕೀಯ ಕ್ಷೇತ್ರದಲ್ಲಿದ್ದು ರೋಗಿಗಳ ಬಗ್ಗೆ ಅವರ ನೋವು, ಹತಾಶೆ, ಸಂಬಂಧಿಕರ ತೊಳಲಾಟ ರೋಗಿಯು ಈ ಸಮಯದಲ್ಲಿ ನಡೆದುಕೊಳ್ಳುವ ರೀತಿ, ಡಾಕ್ಟರ್ ನನಗೆ ರೋಗವಾಸಿ ಮಾಡುತ್ತಾರೋ ಇಲ್ಲವೋ ಎಂಬ ಭಯ ಅವರಲ್ಲಿರುತ್ತದೆ. ಆದರೆ ರೋಗಿಗೆ ಡಾಕ್ಟರ್ ಹೇಳುವ ಸಲಹೆಯಲ್ಲೇ ಕೆಲವೊಂದು ರೋಗ ಗುಣವಾಗುವುದು ಸಹಜವಾಗಿದೆ. ಈ ಸಮಯದಲ್ಲಿ ಮನೆಯವರ ಸಲಹೆಗಳು, ಸಹಕಾರಗಳು ತುಂಬಾ ಅಗತ್ಯವಾಗಿರುತ್ತದೆ. ಹಾಗಾಗಿ ಆರೋಗ್ಯ ಭಾಗ್ಯ ಎಂಬ ಕಥೆಯಲ್ಲಿ ಪ್ರಮುಖವಾಗಿ ಆರೋಗ್ಯವಿದ್ದ ವ್ಯಕ್ತಿ ಯಾವುದೇ ಸಂದರ್ಭ ಬಂದರೂ ಎದುರಿಸುವ ಶಕ್ತಿ ಸಾಮರ್ಥ್ಯವನ್ನು ಹೊಂದಿರುತ್ತಾನೆ. ಜೊತೆಗೆ ಆಹಾರದ ಗುಣಮಟ್ಟ ಉತ್ತಮವಾಗಿರಬೇಕು, ಆಗಿದ್ದಾಗ ಮಾತ್ರ ಉತ್ತಮ ಆರೋಗ್ಯವನ್ನು ಕಾಪಾಡಿಕೊಂಡು ಬರಲು ಸಾಧ್ಯ. ಅನಾರೋಗ್ಯದಿಂದ ದೇಹದ ಶಕ್ತಿ ಕುಂದಿ ಹಲವಾರು ರೋಗಗಳಿಗೆ ತುತ್ತಾಗಬೇಕಾಗುತ್ತದೆ. ಆದುದರಿಂದ ಆರೋಗ್ಯದಿಂದ ಉತ್ತಮ ಜೀವನ ನಿರ್ವಹಣೆ ಸಾಧ್ಯ. " ಅನುಪಮಾ ಅವರು ಸಾಮಾಜಿಕ ಕಾದಂಬರಿಗಳು ಅಥವಾ ಕಥೆಗಳನ್ನೆ ಬರೆದಿಲ್ಲ. ಪೌರಾಣಿಕ, ಕಾಲ್ಪನಿಕ ಹಾಗೂ ಐತಿಹಾಸಿಕ ಕಥೆಗಳನ್ನು ಬರೆದಿದ್ದಾರೆ. ಪ್ರಗತಿಶೀಲ ಬರಹಗಾರರಿಗಿಂತ ಮುಂಚಿನ ಬರಹಗಾರರು ರಾಜ-ಮಹಾರಾಜರ ಬಗೆಗಿನ ವೈಭವೀಕೃತ ಕೃತಿಗಳನ್ನು ಬರೆದಿದ್ದರು. ಆದರೆ ಪ್ರಗತಿಶೀಲ ಸಂದರ್ಭದಲ್ಲಿ ಚಿಂತಕರು ಸಾಮಾಜಿಕ ನೆಲೆಯ ಬೇರಿನ ಬಗ್ಗೆ ಚಿಂತಿಸತೊಡಗಿದರು. ಆಗಲೇ ಅವರು ಕಂಡದ್ದು ಬಡತನ. ಕಾರ್ಮಿಕರ ನೆಲೆಗಳನ್ನು ಅನುಪಮಾ ಅವರು ಐತಿಹಾಸಿಕ ಕಥೆಯನ್ನೂ ಬರೆದಿದ್ದಾರೆ. 'ರೂವಾರಿಯ ಲಕ್ಷ್ಮೀ' ಅಂಥದ್ದೊಂದು ಕಥೆ, ಪ್ರತಿಭಾವಂತ ಬಡ ಶಿಲ್ಪಿ, ಅವನ ಹೆಂಡತಿ ಹಾಗೂ ಅಧಿಕಾರಿಯ

ದರ್ಪ ಈ ಮೂವರನ್ನು ಕೇಂದ್ರವಾಗಿಟ್ಟುಕೊಂಡು ಕಥೆ ಮುಂದುವರಿಯುತ್ತದೆ. ಆದರೆ ಅಧಿಕಾರದ ಕ್ರೌರ್ಯ ಆ ಬಡ ಒಲವಿನ ದಂಪತಿಗಳ ಬದುಕನ್ನು ಪುಡಿಮಾಡುತ್ತದೆ".[೧]

ಅನುಪಮಾ ಅವರು ಎಲ್ಲಾ ರೀತಿಯಲ್ಲೂ ಅನ್ವಯಿಸುವಂತಹ ಕಥೆಗಳನ್ನು ಬರೆದಿದ್ದಾರೆ. ಈ ಕಥೆಯಲ್ಲಿ ಪ್ರಮುಖವಾಗಿ ವ್ಯಕ್ತವಾಗುವ ಸನ್ನಿವೇಶಗಳೆಂದರೆ ಬಡಕುಟುಂಬದಲ್ಲಿ ಬೆಳೆದುಬಂದ ಶ್ರೀಮತಿಯೊಬ್ಬಳು ಗಂಡಹೆಂಡತಿಯು ಸುಖವಾಗಿ ತಮ್ಮ ಜೀವನ ನಿರ್ವಹಿಸಿಕೊಂಡು ಹೇಗೊ ಕಾಲವನ್ನು ಕಳೆಯುತ್ತಾರೆ. ಆಕೆಯ ಗಂಡ ಶಿಲ್ಪಿಯಾಗಿದ್ದು ತನ್ನ ಹೆಂಡತಿಯನ್ನು ಹೋಲುವಂತ ಶಿಲ್ಪವನ್ನು ಕೆತ್ತಿರುತ್ತಾನೆ. ಆದರೆ ಅಲ್ಲಿಗೆ ಬಂದ ಅಧಿಕಾರಿಯೊಬ್ಬ ಶಿಲ್ಪಗಾರನ ಹೆಂಡತಿಯ ಕಣ್ಣಿಗೆ ಬೀಳುತ್ತಾನೆ. ಆಕೆ ಮರದ ಹಿಂದೆ ಅವಿತುಕೊಳ್ಳುತ್ತಾಳೆ. ಅವಳ ಚೆಲುವು ಅಧಿಕಾರಿಯ ಕಣ್ಣುಕುಕ್ಕುವಂತಿರುತ್ತದೆ. ಅವನು ಅವಳನ್ನು ಹೇಗಾದರೂ ಪಡೆಯಬೇಕೆಂದು ರಾತ್ರಿ ಸಮಯದಲ್ಲಿ ಸಹಚರರನ್ನು ಕಳುಹಿಸಿ ಆಕೆಯನ್ನು ತನ್ನರಮನೆಗೆ ತಂದು ಅನುಭವಿಸಿ ಆಕೆಯ ದೇಹವನ್ನು ಮೂರ್ತಿಯನ್ನು ಛಿದ್ರಗೊಳಿಸಿದಂತೆ ಛಿದ್ರಗೊಳಿಸುತ್ತಾನೆ. ಅಧಿಕಾರಿಗಳ ದರ್ಪ ಬಡವರ ಬದುಕನ್ನು ಹೇಗೆ ಪುಡಿಮಾಡುತ್ತದೆ ಎಂಬುದು ಈ ಕಥೆಯ ಸ್ವಾರಸ್ಯ. ಗಂಡ ನನ್ನ ಹೆಂಡತಿಯನ್ನು ಬಿಡ್ರೋ ಎಂದು ಕೂಗಿಕೊಳ್ಳುವಾಗ ಆತನಿಗೆ ಬಲವಾದ ಪೆಟ್ಟುಬಿದ್ದು ಜ್ಞಾನತಪ್ಪಿ ಬೀಳುತ್ತಾನೆ. ಅದು ಆದಮೇಲೆ ಈ ಕ್ರೌರ್ಯವೆಲ್ಲಾ ನಡೆಯುವುದು.

"ಕತ್ತಲು ಕಥೆಯಲ್ಲಿ ಇದ್ದಕ್ಕಿದ್ದಂತೆ ಕುರುಡುತನಕ್ಕೆ ಒಳಗಾದ ನರಸಯ್ಯನು ತನ್ನ ಕುಟುಂಬದಲ್ಲಿ ಯಾರಿಗೂ ಬೇಡವಾಗಿ ತೊಳಲಾಡುತ್ತಾನೆ. ಸಾಯುವ ಪ್ರಯತ್ನವನ್ನು ಮಾಡುತ್ತಾನೆ. ಆದರೆ ಕೆಲಸಕ್ಕಿದ್ದ ಹುಡುಗಿಯ ಪ್ರೀತಿ ಅವನನ್ನು ಸಾವಿನಿಂದ ಹಿಂದಕ್ಕೆ ಎಳೆಯುತ್ತದೆ.

ಈ ಕಥೆಯಲ್ಲಿ ವಯಸ್ಸಾದ ತಾತಾ ಕಣ್ಣುಕಾಣದ ಸ್ಥಿತಿ ತಲುಪಿದಾಗ ಆತ ಮನೆಯಲ್ಲಿ ಯಾರಿಗೂ ಇಷ್ಟವಾಗುವುದಿಲ್ಲ. ಅಂದರೆ ಇವನಿಂದ ಯಾವ ರೀತಿಯಲ್ಲಿಯೂ ಉಪಯೋಗವಿಲ್ಲ ಎಂದು ಅವರ ಭಾವನೆಯಾಗಿರುತ್ತದೆ. ಆ ಕಾಲದಲ್ಲಿಯೇ ಈ ರೀತಿಯ ಘಟನೆಗಳು ನಡೆದಿವೆ ಎಂದರೆ ಇನ್ನೂ ಇವತ್ತಿನ ದಿನ ಹಿರಿಯರ ಮಾರ್ಗದರ್ಶನ ಪಡೆಯಬೇಕು ಎಂಬುದನ್ನು ಮರೆತು ಅಸಡ್ಡೆಯಾಗಿ ಕಾಣುವ ಸ್ಥಿತಿ ಒದಗಿದೆ. ಇದೆಲ್ಲಾವನ್ನು ನೋಡಿದ ಇವರು ಸಾಯುವ ಸ್ಥಿತಿಗೆ

---

೧. ಜಿ.ಎಸ್.ಭಟ್ಟ, ಬರಹಗಾರ್ತಿಯ ಬದುಕು, ಪು. ೨೨.

ತಲುಪುತ್ತಾನೆ. ಆದರೆ ಅವರ ಮನೆಯಲ್ಲಿ ಕೆಲಸಕ್ಕಿದ್ದ ಹುಡುಗಿ ಆ ತಾತನಿಗೆ ನೆರವು ನೀಡಿ ಪ್ರೀತಿಯಿಂದ ನೋಡಿಕೊಂಡಾಗ ಅವರಿಗೆ ಇದಕ್ಕಿಂತ ಬೇರೆ ಭಾಗ್ಯ ಬೇಕಾಗುವುದೇ ಇಲ್ಲ. ಕೆಲಸಕ್ಕೆ ಬಾರದವರು ಎಂದು ತಇಳಿಯದೆ ಅವರಿಗೆ ನೆರವು ನೀಡಿದರೆ ಕತ್ತಲಿನ್ನಲ್ಲೂ ಬೆಳಕು ಕಾಣಬಹುದಾಗಿದೆ.

*****

# ಅಧ್ಯಾಯ – ೪

# ಅನುಪಮಾ ನಿರಂಜನರ ಸಾಮಾಜಿಕ ಪ್ರಜ್ಞೆ

ಕನ್ನಡ ಸಾಹಿತ್ಯದಲ್ಲಿ ಸಾಮಾಜಿಕ ಪ್ರಜ್ಞೆಯ ಆಶಯ ಹೊಂದಿದ ಅನೇಕ ಕಥೆಗಳು ಸಾಕಷ್ಟು ಬಂದಿವೆ. ಮಹಿಳೆಯರು ಬರೆದಿರುವ ಹೆಚ್ಚು ಕಥೆಗಳು ಕುಟುಂಬ ಜೀವನದ ವಸ್ತುಸ್ಥಿತಿಗೆ ಮಾತ್ರ ಸೀಮಿತಗೊಳ್ಳದೆ, ಸಾಮಾಜಿಕ ಜೀವನದತ್ತ ಅಲ್ಲಿಯ ಸಮಸ್ಯೆಗಳತ್ತ ಗಮನಹರಿಸಿದ್ದಾರೆ. ಲೇಖಕಿ ಸಮಾಜವನ್ನು ನೋಡುವ ದೃಷ್ಟಿಕೋನ ಪ್ರಮುಖವಾದುದು. ಈ ಸಮಾಜದ ರೂಢಿ ಸಾಂಪ್ರದಾಯಿಕ ನೆಲೆಗಳಲ್ಲಿ ಬೆಳೆದುಬಂದ ವ್ಯವಸ್ಥೆಯನ್ನು ಕ್ರೂಢೀಕರಿಸುವುದು. ಹಾಗೆಯೇ ಇಲ್ಲಿ ಸುಧಾರಣೆಗಳನ್ನು ತರುವುದಕ್ಕೆ ಹೋಗಿ ಇಕ್ಕಟ್ಟಿನ ಸ್ಥಿತಿಗೆ ಬೀಳುವುದು. ಅದೇ ರೀತಿ ಸಂಪೂರ್ಣವಾಗಿ ಈ ವ್ಯವಸ್ಥೆಯನ್ನು ವಿರೋಧಿಸಿ ಪ್ರತಿಭಟಿಸಿ ಹೊಸ ವ್ಯವಸ್ಥೆಯ ನಿರ್ಮಾಣಕ್ಕಾಗಿ ಯೋಚಿಸುವುದಾಗಿದೆ. ಮೂರು ರೀತಿಯ ಲೇಖಕರಲ್ಲಿ ಅನುಪಮಾ ಅವರ ಕಥೆಗಳಲ್ಲಿ ಸುಧಾರಣೆಯನ್ನು ಬಯಸುವ ಕೌಟುಂಬಿಕ ಜೀವನವನ್ನು ಚಿತ್ರಿಸುವ ಇತ್ತೀಚಿನ ಕಥೆಗಳಲ್ಲಿ ಹೊಸ ವ್ಯವಸ್ಥೆಯ ರಚನೆಗಾಗಿ ಸೈದ್ಧಾಂತಿಕ ಹೋರಾಟವಿದೆ.

ಸಾಮಾಜಿಕ ವಿಷಯವನ್ನು ಆರಿಸಿ ಬರೆದಾಕ್ಷಣ ಸಾಮಾಜಿಕವಾದ ಪ್ರಜ್ಞೆ ಇದೆ ಎಂದು ತಿಳಿಯುವುದಿಲ್ಲ. ಆ ಸಾಮಾಜಿಕ ಜೀವನದ ಬಗ್ಗೆ ಹೆಚ್ಚು ಗಮನ. ಸಮಾಜದ್ಲಲಿ ಬದುಕುವ ಬಹುಸಂಖ್ಯಾತ ಸಾಮಾನ್ಯ ಜನತೆಯ ಬಯಕೆಗಳನ್ನು ಅಲ್ಲಿ ಸೈದ್ಧಾಂತಿಕ ಹಿನ್ನೆಲೆಯಲ್ಲಿ ವಿಶ್ಲೇಷಿಸಿದಾಗ ಅದು ನಿಜವಾದ ರೀತಿಯ ಸಾಮಾಜಿಕ ಪ್ರಜ್ಞೆಯಿಂದ ಕೂಡಿದ ಕೃತಿಯಾಗುತ್ತದೆ. ವ್ಯಕ್ತಿಯು ಸಮಾಜದಿಂದಲೇ ಬೆಳೆಯುತ್ತಾನೆ. ಜನಸಮುದಾಯದ ಬೆಳವಣಿಗೆಯಿಂದ ಸಾಮಾಜದ ಬೆಳವಣಿಗೆ ಉಂಟಾಗುತ್ತದೆ. ಇದರಿಂದಾಗಿ ವ್ಯಕ್ತಿ ಮತ್ತು ಸಮಾಜದ ಮಧ್ಯೆ ಅವಿನಾಭಾವ ಸಂಬಂಧವಿರುತ್ತದೆ. ಆದುದರಿಂದ ಪ್ರತಿಯೊಬ್ಬ ಮನುಷ್ಯನಿಗೂ ಸಾಮಾಜಿಕ ಅಂದರೆ ಸಾಮೂಹಿಕ ಜನಜೀವನದ ಪ್ರಭಾವ ಇದ್ದೇ ಇರುತ್ತದೆ. ಸಮಾಜದ ಬಗೆಗೆ ಚಿಂತಿಸುವುದು ಎಂದರೆ ಅಲ್ಲಿನ ಜನತೆಯ, ಜನಸಮುದಾಯದ ಬಗ್ಗೆ ಯೋಚಿಸುವುದು ಎಂದು ತಿಳಿಯಬೇಕಾಗುತ್ತದೆ. ಇದರಿಂದಾಗಿ ಜನಸಮುದಾಯದ ಪ್ರಜ್ಞಾಪೂರ್ವಕವಾದ ಸೂಕ್ಷ್ಮ ಅಧ್ಯಯನವೇ ಸಾಮಾಜಿಕ ಪ್ರಜ್ಞೆಯೆಂದು ಕರೆಯಲು ಸಾಧ್ಯ.

"ಮನುಷ್ಯನು ಕೆಲವೊಂದು ವಿಷಯಗಳಲ್ಲಿ ಮುಂದುವರಿಯಲು ಕಾರಣವೆಂದರೆ ರೂಢಿಯಲ್ಲಿರೋದನ್ನ ಬದಲಾಯಿಸೋಕೆ ಆತನಿಗೆ ಭಯ, ಅಂಜಿಕೆ, ಈ ಭಯವನ್ನು

ದೂರ ಮಾಡಲು ಅಂಧಕಾರ ಕಳೆಯಬೇಕು, ತೊಲಗಬೇಕು. ಇದೆಲ್ಲಾ ಶಿಕ್ಷಣದಿಂದ ಮಾತ್ರ ದೂರಮಾಡಲು ಸಾಧ್ಯ. ಇದರ ಜೊತೆಗೆ ಆರ್ಥಿಕವಾಗಿ ಇವರು ಮುಂದುವರಿದಿದ್ದರೆ ಅವರಿಗೆ ವಿದ್ಯಾಭ್ಯಾಸ ಸಿಗುವುದು ಕಷ್ಟವೇ. ಹೀಗೆ ನಮ್ಮ ಸಮಾಜ ಒಂದು ವಿಷವರ್ತುಲದಲ್ಲಿ ಸುತ್ತುತ್ತಾ ಇದೆ". ಮದುವೆಯಾದ ಒಂದು ಹೆಣ್ಣು, ಒಂದು ಮಗುವನ್ನು ಹೆತ್ತು, ಸುಖಜೀವನವನ್ನು ನಿರ್ವಹಿಸುತ್ತಿರುವಾಗಲೇ ಆಕೆಯ ಪ್ರೀತಿಯ ಮುದ್ದಿನ ಗಂಡನು ತೀರಿಕೊಂಡಾಗ ಇದೇ ಹೆಣ್ಣಿಗೆ ಮತ್ತೊಂದು ಮರುಮದುವೆಯನ್ನು ಮಾಡಲು ಹೊರಟಾಗ ಈ ಸಮಾಜ ಆಕೆಯ ಮರುವಿವಾಹವನ್ನು ಬೇರೆ ಗಂಡಿನೊಂದಿಗೆ ನಡೆಯುವುದನ್ನು ಒಪ್ಪುವುದಿಲ್ಲ. ಯಾಕೆಂದರೆ ಹೆಣ್ಣಿನ ಬದುಕಿಗೆ ಯಾವ ಬದಲಾವಣೆಗೂ ಬೆಲೆ ಕೊಡದ ರೂಢಿ, ಸಂಪ್ರದಾಯವಾದಿಗಳು ಈ ಸಾಮಾಜಿಕ ವ್ಯವಸ್ಥೆಯಲ್ಲಿ ಗೊಡ್ಡು ನಂಬಿಕೆಗಳನ್ನು ಸೃಷ್ಟಿಸುತ್ತಲೇ, ಬೆಳೆಸುತ್ತಲೇ ಬಂದಿದ್ದಾರೆ. ಗಂಡನನ್ನು ಕಳೆದುಕೊಂಡ ಈ ವಿಧವೆಗೆ ಮತ್ತೊಬ್ಬ ಪುರುಷನು ಅವಳನ್ನು ಮತ್ತೆ ಹೊಸ ಬದುಕಿಗೆ, ಜೀವನಕ್ಕೆ ಬರುವಂತೆ ಹೇಳುವುದು, ಸಮಾಜ ವ್ಯವಸ್ಥೆ ಇಂತಹ ಮದುವೆಯನ್ನು ಒಪ್ಪದಿದ್ದಾಗ ಅವರು ದೃಢನಿರ್ಧಾರ ಮಾಡಿ ಬಹುದೂರ ಹೋಗಿ ಇವರೆಲ್ಲರಿಂದ ಪಾರಾಗಿ ಮರುಮದುವೆ ಮಾಡಿಕೊಂಡು ಬರಲು ನಿರ್ಧರಿಸುವುದು, ಹಾಗೆಯೇ ವಿಧವೆಯಾದ ಹೆಣ್ಣಿನ ಮನಸ್ಸಿನಲ್ಲಿ ಮೂಡುವ ಭಾವನೆಗಳೇನೆಂದರೆ ನಾನು ಒಬ್ಬ ವಿಧವೆ, ನನಗೂ ಮಗು ಇದೆ. ನಮ್ಮ ಮದುವೆ ಅಷ್ಟು ಸುಲಭವಾಗಿ ನಡೆಯುವುದಕ್ಕೆ ಮನೆಯವರು, ಈ ಸಮಾಜ ಒಪ್ಪುತ್ತದೆಯೇ? ಇದು ಸರಿಯಲ್ಲ ಎಂದು ಆಕೆಯ ಮನದಾಳದಲ್ಲಿ ಮೂಡುವುದು ಸಹಜ. ಅಂದರೆ ಆ ಕಾಲಘಟ್ಟದಲ್ಲಿ ಆಕೆಯ ಮನೋಸ್ಥಿತಿಯು ಅಲ್ಲಿಗೆ ಅವಲಂಬನೆಯಾಗಿದೆ ಎಂಬುದು ಈಗಿನ ಕಾಲದ ಸ್ತ್ರೀಯರಿಗೆ ಅರ್ಥವಾಗುವಂತೆ ಮನದಟ್ಟಾಗುವಂತಿದೆ. ಆ ವಿಧವೆಯಾದ ಹೆಂಗಸು ಹೇಳುವ ರೀತಿಯಲ್ಲಿ ನಾನು ಎಂಜಲು ಹೆಂಗಸು, ನನಗೆ ಒಂದು ಮಗುವಿದೆ. ಈ ರೀತಿ ಇರುವಾಗ ಮರುಮದುವೆಯಾಗುವುದು ಎಲ್ಲಿಯ ಮಾತು? ಎಂದಾಗ ಮದುವೆಯಾಗಲು ಬಯಸಿ ಬಂದ ಹುಡುಗ ಹೇಳುವ ರೀತಿ ಎಂದರೆ ಆತ ಕೊಡುವ ಉತ್ತರ ನಮ್ಮೆಲ್ಲರ ಗಮನವನ್ನು ಸೆಳೆಯುವಂತಿದೆ.

ವಿಧವೆಯಾದ ಹೆಂಗಸರು ಮತ್ತೆ ಮರುವಿವಾಹವಾಗುವುದು ಬೇಡ ಎಂಬುದು ತಲತಲಾಂತರಗಳಿಂದ ಬಂದದ್ದು ಅದು ತುಂಬಾ ತಪ್ಪು ಎಂಬುದನ್ನು ತೋರಿಸಬೇಕು. ಎಂಜಲು ದೇಹವು ಎಂದು ಯಾಕೆ ಹೇಳುವುದು, ನಾನೂಕೂಡ ಪರ ಹೆಂಗಸರ ಜೊತೆ ಮಲಗಿಬರುವುದು, ಸಂಬಂಧವನ್ನು ಇಟ್ಟುಕೊಳ್ಳುವುದು, ನನ್ನಲ್ಲಿ ಉಂಟಾಗುವ ಕಾಮ,

ಪ್ರೀತಿಯನ್ನೆಲ್ಲಾ ಅವರಿಗೆ ಕೊಡುವುದು ಅನ್ನೋದನ್ನೆಲ್ಲಾ ನೆನಪಿಟ್ಕೊಕ್ಕೋ, ನಮ್ಮಿಬ್ಬರ ಪ್ರೀತಿ, ದೇಹ ಮನಸ್ಸುಗಳು ಒಂದಾದರೆ ಇದು ಪ್ರೀತಿ, ಇದೆಲ್ಲಾ ಕೊನೆಯವರೆವಿಗೂ ಇರುವಂಥದ್ದು" ಎಂದು ಆ ಯುವಕ ವಿಧವೆಯಾದ ಹೆಂಗಸಿನ ಜೊತೆ ಹೇಳಿದಾಗ ಆ ಕಾಲದಲ್ಲಿಯೂ ಸ್ವಲ್ಪ ಸ್ವಲ್ಪವಾಗಿ ಬದಲಾವಣೆಗಳು ಹೆಣ್ಣಿಗಾಗಿ ಮೂಡಿಬರುತ್ತಿತ್ತು ಎಂಬುದನ್ನು ಮನಗಾಣಬಹುದಾಗಿದೆ. ಈ ರೀತಿಯಲ್ಲಿ ಆ ಯುವಕ ವಿಧವೆಯಾದ ಹೆಣ್ಣಿನ ಮನಸ್ಸಿನಲ್ಲಿ ಕೆಲವೊಂದು ಆಶಾಕಿರಣಗಳನ್ನು ಮೂಡಿಸುವ ಕತ್ತಲೆಯಲ್ಲಿ ಚಿಕ್ಕ ಬೆಳಕನ್ನು ಕಂಡಂತೆ ಹೊಸ ಹೊಸ ಸಂಗತಿಗಳು, ಹೊಸ ಆಸೆಗಳನ್ನು ಆಕೆಯಲ್ಲಿ ಹುಟ್ಟುಹಾಕುತ್ತಾನೆ. ಒಂದು ಸಮಾಜ ಯಾವುದೋ ಕಾಲದಲ್ಲಿದ್ದ ಗೊಡ್ಡು ನಂಬಿಕೆ, ಸಂಪ್ರದಾಯ, ಆಚಾರವಿಚಾರಗಳನ್ನು ಮುಂದುವರಿಸಲು ಪ್ರಯತ್ನಿಸಿದಾಗ ಇಂತಹ ಯುವ ಪುರುಷರು ಹೊಸ ಪೀಳಿಗೆಯ ಯುವಕರು ಅದನ್ನೆಲ್ಲಾ ಮರು ಪ್ರಶ್ನಿಸುವುದು, ಪ್ರತಿಭಟಿಸುವುದು ತುಂಬಾ ಪ್ರಮುಖವಾಗುತ್ತದೆ. ಈ ವ್ಯವಸ್ಥೆಯಲ್ಲಿ ಸ್ಥಾನವಿದೆಯೆಂಬ ಅಂಶ ನಿಜಕ್ಕೂ ಆಶಾದಾಯಕವಾದ ಬೆಳವಣಿಗೆ. ಈ ಸಾಮಾಜಿಕ ಪ್ರಜ್ಞೆಯಲ್ಲಿ ಮೂಡಿಬಂದಿದೆ.

ವ್ಯಕ್ತಿ ಸಮಾಜದ ಒಂದು ಘಟಕ. ಅವನಿಗೆ ಅತೀ ಅವಶ್ಯಕವಾದ ಅನುಭವಗಳಿರುವುದು ಸಹಜ. ಅನೇಕ ವೇಳೆ ಒಬ್ಬರಿಗೆ ಆದ ಅನುಭವ ಈ ಸಮಾಜದ ಬಹುಪಾಲು, ಸಾಕಷ್ಟು ಪಾಲು ಜನರ ಅನುಭವಕ್ಕೂ ಅನುಭವವೂ ಆಗಿರುತ್ತದೆ. ಒಬ್ಬ ತನ್ನ ನೋವು ನಲಿವುಗಳನ್ನೇ ಸಾಕಷ್ಟು ಜನರಲ್ಲಿ ಗುರುತಿಸಿಕೊಳ್ಳುವುದು ಸಾಧ್ಯ. ಒಬ್ಬನ ಸಮಸ್ಯೆ ಅನೇಕರ ಸಾಮಾನ್ಯ ಸಮಸ್ಯೆ ಎನ್ನಬಹುದು. ಆ ಸಾಮಾನ್ಯ ಅನುಭವಕ್ಕೆ ಒಂದು ಸಾಮೂಹಿಕ ಸ್ವರೂಪ ಲಭ್ಯವಾಗುತ್ತದೆ. ಒಂದು ನಿರ್ಧಿಷ್ಟ ಅನುಭವ ಸಮಾಜದ ಒಂದು ಅವಿಭಾಜ್ಯ ಅಂಗವಾಗುತ್ತದೆಯೋ ಆಗ ಅದನ್ನು ಸಾಮಾಜಿಕ ಸ್ಥಿತಿ' ಎನ್ನಬಹುದು. ಈ ಸ್ಥಿತಿಯನ್ನು ಕುರಿತ ವಿಷಯವೇ ಸಾಮಾಜಿಕವಸ್ತು. ಅನುಪಮಾ ಅವರ ಸಾಮಾಜಿಕ ಪ್ರಜ್ಞೆಯನ್ನು ಗುರುತಿಸ ಹೊರಡುವ ದಿಕ್ಕನ್ನು ಸ್ಪಷ್ಟಗೊಳಿಸುವ ಹಿನ್ನೆಲೆಯಲ್ಲಿ ಈ ಎಲ್ಲಾ ಮಾತುಗಳನ್ನು ಹೇಳಬೇಕಾಯಿತು. ಸಮಾಜದ ಹಳೆಯ ರೂಢಿಗಳಿಗೆ ತುತ್ತಾಗುವ ಅಧಿಕಾರಿಗಳ ದರ್ಪಕ್ಕೆ ಹೆಣ್ಣು ಹೇಗೆ ಬಲಿಯಾಗುತ್ತಾಳೆಂಬುದು 'ರೂವಾರಿಯ ಲಕ್ಷ್ಮಿ' ಎಂಬ ಕಥೆಯಲ್ಲಿ ಮೂಡಿಬರುವ ಹೃದಯ ವಿದ್ರಾವಕ ಸ್ಥಿತಿಯನ್ನು ಇಲ್ಲಿ ಚಿತ್ರಿಸಿದ್ದಾರೆ. ವರುಣಾಚಾರಿ ಎಂಬ ಬಡ ಶಿಲ್ಪಿಯ ಹೆಂಡತಿ ಮಾದೇವಿ. ಈಕೆ ಒತ್ತಿನ ತುತ್ತಿಗಾಗಿ ಪಕ್ಕದ ಮನೆಯವರ ಹತ್ತಿರ ರೊಟ್ಟಿಮಾಡಲು ಹಿಟ್ಟನ್ನು ಸಾಲವಾಗಿ ಪಡೆದಿರುತ್ತಾಳೆ.

ಆಕೆಯ ಸಾಲವನ್ನು ಇನ್ನು ತೀರಿಸಲು ಆಗಿರುವುದಿಲ್ಲ. ಇಂತಹ ಸಂದರ್ಭದಲ್ಲಿ ಹಿಟ್ಟನ್ನು ಸಾಲವಾಗಿ ಕೊಟ್ಟಂತಹ ಗೌರಿಯು ಒಂದು ದಿನ ಅಕ್ಕಪಕ್ಕದ ಮನೆಯವರೆದುರಿಗೆ ಮಾದೇವಿ ಕೊಟ್ಟ ಹಿಟ್ಟನ್ನು ವಾಪಾಸು ಕೊಡು ಇನ್ನಷ್ಟು ದಿನಕ್ಕೆ ನೀನು ಆ ಸಾಲ ತೀರಿಸುತ್ತೀಯಾ ಎಂದು ಕೇಳಿದಾಗ ಮಾದೇವಿ ತುಂಬಾ ಸ್ವಾಭಿಮಾನಿ. ಆದರೆ ಅವರೆಲ್ಲರ ಎದುರು ಕೇಳಿದಾಗ ಅವಮಾನಿತಳಾಗಿ ಗಂಡ ವರುಣಾಚಾರಿ ಮನೆಗೆ ಬಂದಾಗ ಆಕೆಯ ಸಪ್ಪೆಯ ಮುಖವನ್ನು ನೊಡಿ ಸಮಸ್ಯೆ ತಿಳಿದಾಗ ಮಾದೇವಿ ಹೇಳುತ್ತಾಳೆ. ಆಕೆಯ ಸಾಲವನ್ನು ನನ್ನ ಮೂಗುತಿಯನ್ನು ಮಾರಿಯಾದರೂ ಸಾಲ ತಿರಿಸಬೇಕು ಎನ್ನುತ್ತಾಳೆ. "ಅದಕ್ಕೆ ಪ್ರತಿಯಾಗಿ ಅವನ ಬಳಿ ಯಾವ ಉತ್ತರವಿತ್ತು"?[೧] ಆಕೆ ಮತ್ತೆ ಮಾತಾಡುತ್ತಾ ಹಿಂಗೆ ಬದುಕಲು ಆಗುತ್ತದೆಯೇ ಎಲ್ಲಾದರೂ ದೂರ ಹೊರಟು ಹೋಗೋಣ ಎಂದು ಹೇಳುತ್ತಾಳೆ. ಅಂದರೆ ಬಡತನ ಎಷ್ಟು ಕ್ರೂರವಾಗಿದೆ. ಅದನ್ನೆಲ್ಲಾ ಸಹಿಸಿಕೊಂಡು ಪಕ್ಕದವರ ಸಾಲವನ್ನು ತೀರಿಸಬೇಕೆಂಬ ಸ್ವಾಭಿಮಾನದ ತುಡಿಯುವಿಕೆ, ಆಕೆಯಲ್ಲಿ ಮೂಡಿಬಂದ ಬಗೆಯನ್ನು ನಾವು ಅರಿಯಬಹುದಾಗಿದೆ.

ವರುಣಾಚಾರಿಗೆ ದೋರ ಸಮುದ್ರದ ರಾಜ ವಿಷ್ಣುವರ್ಧನನ ಆದೇಶದ ಮೇರೆಗೆ ಜಕಣಾಚಾರಿಯು ವರುಣಾ ಜಾರಿಗೆ ಲಕ್ಷ್ಮೀಯ ವಿಗ್ರಹವನ್ನು, ಶಿಲಾಮೂರ್ತಿಯನ್ನು ಕೆತ್ತುವುದಕ್ಕೆ ಆಜ್ಞೆಯನ್ನು ಪಡೆದಿರುತ್ತಾನೆ. ಆ ಸಂದರ್ಭದಲ್ಲಿ ಮಾದೇವಿ ನಾಚುತ್ತಾ ಹೇಳುತ್ತಾಳೆ. "ಇನ್ನು ಆರೇ ತಿಂಗಳಲ್ಲಿ ನೀವು ನನ್ನ ಮಗುವಿಗೆ ತಂದೆಯಾಗ್ತೀರಾ"[೨] ಅದನ್ನು ಕೇಳಿದ ವರುಣಾಚಾರಿ ಅದು ಅವನ ಜೀವಮಾನದಲ್ಲೆಲ್ಲಾ ಅತ್ಯಂತ ಸಂತೋಷದ ಘಳಿಗೆ ಎಂದರೆ ತಪ್ಪಾಗಲಾರದು. ಅಂದೇ ಜಕಣಾಚಾರ್ಯ ವರುಣಾಚಾರಿಗೆ ನಿರ್ದೇಶನ ಕೊಟ್ಟಿದ್ದು ಒಂದು ಲಕ್ಷ್ಮೀ ವಿಗ್ರಹ ಮಾಡು ಎಂದು, ಅದಕ್ಕೆ ವರುಣಾಚಾರಿಯು ಅಪ್ಪಣೆ ಎಂದು ಸ್ವೀಕರಿಸಿರುತ್ತಾನೆ. ಈ ವಿಗ್ರಹವನ್ನು ಕೆತ್ತಿ ಇನ್ನೇನೋ ಮುಗಿಯುವಷ್ಟೊತ್ತಿಗೆ ಅದನ್ನು ನೋಡಿದ ಈತನ ಹೆಂಡತಿ ಮಾದೇವಿಯು 'ಅವ್ವಯ್ಯಾ' ಎಂದು ಉದ್ಗಾರ ತೆಗೆಯುತ್ತಾಳೆ. ಈ ಪ್ರತಿಮೆಯು ನನ್ನ ರೂಪದಂತೆಯೇ ಇದೇ ಎಂದು ತುಂಬಾ ಸಂತೋಷಪಡುತ್ತಾಳೆ. ಈ ಸಂತೋಷ ಕೂಟದಲ್ಲಿರುವ ಈ ದಂಪತಿಗೆ ಆಗಬಾರದ್ದು ಈ ಸಂದರ್ಭದಲ್ಲಿಯೇ ಆಗಿ ಹೋಗುತ್ತದೆ. ಇವರ ಜೀವನವೇ ನಾಶಹೊಂದುವಂತಹ ಘಟನೆ ನಡೆದೆ ಹೋಗುತ್ತದೆ. ದೊರೆಗಳು ಈ ಲಕ್ಷ್ಮೀ ವಿಗ್ರಹ ನೋಡಿದರೆ ಬಹುಮಾನ ಸಿಗಬಹುದು

---

೧. ರೂವಾರಿಯ ಲಕ್ಷ್ಮೀ, ಪು. ೯.
೨. ರೂವಾರಿಯ ಲಕ್ಷ್ಮೀ, ಪು. ೧೩.

ಎಂದು ಆಸೆಗಣ್ಣಿನಿಂದ, ಹಾಗೆಯೇ ನಿರಾಸೆ ತುಂಬಿದ ಧ್ವನಿಯಲ್ಲಿ ಇವರು ಮಾತಾಡಿಕೊಳ್ಳುವಾಗ ದೂರದಿಂದ ಕೆಮ್ಮಣ್ಣಿನ ಧೂಳು ಸುತ್ತಲೂ ಎದ್ದಿರುತ್ತದೆ. ಯಾರೋ ಬಂದಿದ್ದಾರೆ ಎಂದು ತಮ್ಮ ಕಣ್ಣುಗಳನ್ನು ಒರೆಸಿ ನೋಡುವಷ್ಟರಲ್ಲಿ ದಳವಾಯಿ ಬೊಮ್ಮಣ್ಣ ಇವರ ಕಣ್ಣಿಗೆ ಬೀಳುತ್ತಾನೆ. ಮಾದೇವಿ ಅವನನ್ನು ನೋಡಿ ಮರಗಳ ಪೊದೆಯಲ್ಲಿ ಹೆದರಿ ಅವಿತುಕೊಂಡಾಗ ಬೊಮ್ಮಾಯಿಯ ಕಣ್ಣು ಆಗಲೇ ಆಕೆಯ ಮೇಲೆ ಕ್ರೂರವಾದ ನೋಟ ಬೀಳುತ್ತದೆ. 'ಅಬ್ಬಾ'! ಇಷ್ಟು ದಿನಗಳ ತನಕ ನನ್ನ ಕಣ್ಣಿಗೆ ಬೀಳದಿದ್ದ ಹೆಣ್ಣು ಈತನ ಹೆಂಡತಿಯೆ ಎಂದು ತಿಳಿದು ವರುಣಾಚಾರಿಯ ಬಳಿಗೆ ಬಂದು ಅವನೆದುರಿಗೆ ಇದ್ದ ಶಿಲ್ಪಕೆತ್ತನೆಯನ್ನು ದೃಷ್ಟಿಸಿ ನೋಡಿ ತುಂಬಾ ಚೆಂದವಾಗಿದ್ದ ಮುಖ ಆ ಹೆಣ್ಣಿನಂತಿದೆ. ಇದೇ ಮುಖ ಅದು ಎಂದು ಕಿಡಿ ಕಾರಿದನು. ಆದರೆ ಈ ಬೊಮ್ಮಾಯಿಯ ಕೆಟ್ಟದೃಷ್ಟಿ ಮಾದೇವಿಯ ಮೇಲಿರುತ್ತದೆ. ಇಷ್ಟು ಸುಂದರವಾದ ಹೆಂಡತಿ ಈತನಿಗೆ ಎಂದು ತಿಳಿಯುತ್ತಾನೆ. "ಲಕ್ಷ್ಮೀ ವಿಗ್ರಹಾನೋ? ಇಂಗೇನೇನೋ ಕೆತ್ತುವುದು ಆಚಾರಿ? ಆ ಮದನಿಕೆ ನೋಡು"[೧] .... ಎಂದು ವ್ಯಂಗ್ಯಭಾವದಿಂದ ಹೇಳುತ್ತಾನೆ. ದಳವಾಯಿ ತೋರಿಸಿದ ಮೂರ್ತಿ ನಗ್ನ ಶಿಲಾನರ್ತಕಿ ಆ ರೀತಿ ಲಕ್ಷ್ಮಿಯ ವಿಗ್ರಹವನ್ನು ಕೆತ್ತಲಾದೀತೇ? ಎಂದು ವರುಣಾಚಾರಿಯು ಉತ್ತರಿಸಿದಾಗ ಏನೋ ಬಡವ ಹಿಂದಕ್ಕೆ ತಿರುಗಿ ಮಾತನಾಡ್ತೀಯಾ ಎಂದು ವರುಣಾಚಾರಿಗೆ ತಡೆಯಲಾರದಷ್ಟು ಚಾಟೀ ಏಟು ಬೀಳುತ್ತದೆ. ಇದನ್ನು ಕಂಡ ಮಾದೇವಿಯೂ ಪೊದೆಯಿಂದ ಓಡಿ ಬಂದು ಗಂಡನ ರಕ್ಷಣೆಗೆ ನಿಲ್ಲುವ ರೀತಿ ಹೃದಯವನ್ನು ಕರಗಿಸುವಂತಹದು. ಅಂದು ರಾತ್ರಿಯಾದ ಮೇಲೆ ಸೊಪ್ಪಿನ ರಸವನ್ನು ಗಾಯದ ಮೇಲೆ ಮಾದೇವಿ ಹಚ್ಚಿದಳು. ಹೆದರಿಕೆಯಿಂದ ದುಃಖದಿಂದ ಮೌನವಾಗಿದ್ದಳು. ಈತ ನರಳುತ್ತ ಈ ಊರನ್ನೇ ಬಿಟ್ಟು ಬಹುದೂರ ಹೊರಟುಹೋಗಬೇಕು. ಮಾದೇವಿ ಎಂದು ಹೆಂಡತಿಗೆ ಹೇಳುತ್ತಾನೆ. ಮಾದೇವಿ ಅಳುತ್ತಾ ಹಾಗೇ ಮಲಗಿಬಿಡುತ್ತಾಳೆ. ಹೀಗಿರುವಾಗ ಮಧ್ಯರಾತ್ರಿಯಲ್ಲಿ ಯಾರೋ ಬಾಗಿಲು ಬಡಿದ ಶಬ್ದವಾಗುತ್ತದೆ. ಆದರೆ ಆಗುವ ರೀತಿ ವಿಚಿತ್ರವಾದುದು, ದಳವಾಯ ಕಳುಹಿಸಿದ ಸಿಪಾಯಿಗಳು ನಡೆದುಕೊಳ್ಳುವ ರೀತಿ ವರುಣಾಚಾರಿಗೆ ಗಾಯದ ಮೇಲೆ ಬರೆ ಎಳೆದಂತೆ ಆತನಿಗೆ ಪ್ರಜ್ಞೆಹೋಗುವಂತೆ ಕೈಕಾಲುಗಳನ್ನು ಕಟ್ಟಿಹಾಕಿ ಮಾದೇವಿಯನ್ನು ಮಧ್ಯರಾತ್ರಿಯಲ್ಲಿ ಎಳೆದೋಯ್ದು ಬೊಮ್ಮಾಯಿಯು ಆಕೆಯ ದೇಹಸುಖವನ್ನು ಅನುಭವಿಸಿ ಅವಳನ್ನು ಛಿದ್ರಛಿದ್ರಮಾಡಿ ಬೀಸಾಡುವ ಪರಿ ಹೇಳಲೂಬಾರದು ಆ ರೀತಿಯಲ್ಲಿ ಆಕೆಯನ್ನು ಬೀಸಾಡುತ್ತಾನೆ. ಇತ್ತ

---

೧. ಅನುಪಮಾ ನಿರಂಜನ, ರೂವಾರಿಯೆ, ಲಕ್ಷ್ಮೀ, ಪು. ೧೫.

ವರುಣಾಚಾರಿಯು ಬೆಳಗಾದ ಮೇಲೆ ಯಾರೋ ಸ್ನೇಹಿತ ಬಂದು ಕಟ್ಟಿದ್ದ ಹಗ್ಗಗಳನ್ನೆಲ್ಲಾ ಬಿಚ್ಚಾಕುತ್ತಾನೆ. ನಂತರ ವರುಣಾಚಾರಿಯು ರಾತ್ರಿಯಾದುದೆಲ್ಲವನ್ನೂ ನೆನಸಿಕೊಂಡು ದಳವಾಯಿ ಬೊಮ್ಮಾಯಿ ಅರಮನೆಗೆ ಬರುತ್ತಾನೆ. ಆದರೆ ಅಲ್ಲಿ ಆಗುವುದೇ ಬೇರೆ ರೀತಿ ಸ್ವಾಗತ. ವರುಣಾಚಾರಿಗೆ ಆಗುವ ಅಪಮಾನ, ನಿಂದನೆ ಈ ರೀತಿಯ ಘಟನೆಯನ್ನು ನೋಡಿದಾಗ ಎಂತಹ ಸ್ಥಿತಿ ರೂವಾರಿಯ ಲಕ್ಷ್ಮಿಯಲ್ಲಿ ಒದಗಿಬರುತ್ತದೆ ಎಂಬುದನ್ನು ಅನುಪಮಾ ಅವರು ತಮ್ಮ ಕಥಾಸಂಕಲನದಲ್ಲಿ ಬರೆದಿದ್ದಾರೆ. ಸಾಮಾನ್ಯ ಜನತೆಯ ಗೋಳಿನಲ್ಲಿ ಅಧಿಕಾರದ ಬಲದಿಂದ ಉಳ್ಳವರು ಬಳಸಿಕೊಳ್ಳುವ ರೀತಿಯನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾರೆ.

ಈ ಕಥೆಯಲ್ಲಿ ಹೆಣ್ಣಿನ ಅಸಹಾಯಕ ಸ್ಥಿತಿ ಹಾಗೂ ಅವರ ಬಡತನವನ್ನು ಆಧಾರವಾಗಿಟ್ಟುಕೊಂಡುದೇ ಅಲ್ಲದೆ ಆ ಕಾಲಮಾನದಲ್ಲಿ ಅಧಿಕಾರಿಗಳು, ಉಳ್ಳವರದೇ ಆಡಳಿತವಿದ್ದುದರಿಂದ ತಮಗಿಷ್ಟ ಬಂದ ರೀತಿಯಲ್ಲಿ ನಡೆದುಕೊಳ್ಳುವುದು ಇಲ್ಲಿ ವ್ಯಕ್ತವಾಗಿದೆ. ಆದರೆ ಅನ್ಯಾಯವಾದ ವರುಣಾಚಾರಿ ಮತ್ತು ಆತನ ಹೆಂಡತಿಗೆ ನ್ಯಾಯವನ್ನು ಒದಗಿಸಿಕೊಡುವುದು ಆ ಕಾಲದಲ್ಲಿ ಕಷ್ಟವಾಗಿತ್ತು. ಆದರೆ ಇತ್ತೀಚೀನ ದಿನಗಳಲ್ಲಿ ಅಂತಹವು ಎಲ್ಲೋ ಒಂದು ಎರಡೋ ಆ ರೀತಿ ಹೆಣ್ಣು ಶೋಷಣೆಗೆ ಹತ್ಯಾಚಾರಕ್ಕೆ ಒಳಗಾಗಬಹುದು. ಆದರೆ ಆ ಕೃತ್ಯಕ್ಕೆ ಸೇರಿದವರಿಗೆ ಕಾನೂನು ಇರುವುದರಿಂದ ಅವರಿಗೆ ಶಿಕ್ಷೆಯಾಗುತ್ತದೆ ಎಂಬ ಭಯದಿಂದಲೂ ಇಂತಹ ಕೃತ್ಯಗಳು ಕಡಿಮೆಯಾಗಿವೆ ಎಂದು ತಿಳಿಯಬಹುದು. ಆದರೆ ಸಂಪೂರ್ಣವಾಗಿ ಕಡಿಮೆಯಾಗದಿದ್ದರೂ ಎಲ್ಲೋ ಒಂದು ಕಡೆಗಳಲ್ಲಿ ಇಂತಹವೆಲ್ಲ ಸಂಭವಿಸಬಹುದು. ಜಾಸ್ತಿಯೇನೂ ಆಗುತ್ತಿಲ್ಲವಾಗಿದೆ.

ಅನುಪಮಾ ಅವರು ಕೆಲವು ಸಾಮಾಜಿಕ ಸ್ಥಿತಿಗತಿಗೆ ಸ್ಪಂದಿಸಿದ ಉದಾಹರಣೆಯಾಗಿ 'ವಿಳಾಸವಿಲ್ಲದ ಮಗು' ಕಥಾಸಂಕಲನಗಳನ್ನು ನೆನೆಸಬಹುದಾಗಿದೆ. ಈ ಕಥೆಯಲ್ಲಿ ತಾಯಿಯನ್ನು ಕಳೆದುಕೊಂಡ ತಬ್ಬಲಿ ಮಗುವನ್ನು ಸಾಕಲು ಹೃದಯವೇ ಕಠಿಣವಾಗಿರುವ ಒಬ್ಬ ನರ್ಸ್ ಸುಂದರಮ್ಮಳನ್ನು ನೇಮಿಸುತ್ತಾರೆ. ಆದರೆ ಕ್ರಮೇಣ ಆಕೆ ಪ್ರಾರಂಭದಲ್ಲಿ ಯಾಂತ್ರಿಕವಾಗಿ ಆ ಮಗುವಿನ ಲಾಲನೆ ಪೋಷಣೆ ಮಾಡುತ್ತಾಳೆ. ದಿನ ಕಳೆದಂತೆ ಅಸಹಾಯಕ ಮಗುವಿನ ಆಕರ್ಷಣೆ ಜಾಸ್ತಿಯಾಗುತ್ತದೆ. ಅದೇ ರೀತಿಯಲ್ಲಿ ಆಕೆಯ ಕಡುಸಿಟ್ಟು ಕಡಿಮೆಯಾಗಿ ತಾಯ್ತನವೇ ಅವಳಲ್ಲಿ ಹೊರಹೊಮ್ಮಿ ಮಗುವನ್ನು ನನ್ನಿಂದ ಇನ್ನೇನೋ ದೂರವಾಗುತ್ತದೆ ಎಂದು ಕಂಡುಬಂದಾಗ ಆಕೆಯಲ್ಲಿದ್ದ ಒರಟುತನಗಳು ಮಾಯವಾಗಿ ಕರುಣೆ, ತಾಳ್ಮೆಗಳೊಂದಿಗೆ ಮಗುವಿನ ಬಗ್ಗೆ

ಕನಸುಗಳನ್ನು ಕಾಣುತ್ತಾಳೆ. ಮಗುವನ್ನು ಮರೆಯಲು ಪ್ರಯತ್ನಿಸಿದರೂ, ಅದರ ಲಾಲನೆ, ಪಾಲನೆ, ಮಗುವಿನ ನಗು ಎಲ್ಲವೂ ಆ ನರ್ಸ್ ಕಣ್ಣಮುಂದೆ ಬಂದಂತೆ ಭಾಸವಾಗುತ್ತದೆ. ಯಾರದೋ ಮಗು ಅತ್ತರೆ ಅದು ತನ್ನದೇ ಮಗುವಿನ ಅಳು ಎಂದು ಭ್ರಮಿಸುವಂತೆ ಆಗುತ್ತದೆ. ಹಾಗೆಯೇ ಆಕೆಯ ಸೇವೆಯು ಒಂದು ತಿಂಗಳು ಮುಗಿದು ಪಕ್ಕದ ವಾರ್ಡಿಗೆ ಅವಳ ಜವಾಬ್ದಾರಿಯು ಬಂದಾಗ ಆಕೆ ಸಂಕಷ್ಟಕ್ಕೆ ಸಿಲುಕುತ್ತಾಳೆ. ನನ್ನಿಂದ ಮಗು ದೂರವಾಗುವುದು ಸಾಧ್ಯವಿಲ್ಲ ಎಂದು ನಿರ್ಧಾರಮಾಡಿ ದೊಡ್ಡ ಡಾಕ್ಟರ್ ಒಳಗೆ ಹೋಗಿ ಡಾಕ್ಟರ್ ನನಗೆ ಆ ಮಗು ಬೇಕು ಎಂದು ವಿನಯದ ಮಾತುಗಳನ್ನು ಕೇಳಿದ ಡಾಕ್ಟರ್‌ಗೆ ಆಶ್ಚರ್ಯವಾಗಿ ಅವರು ಆ ಮಗುವನ್ನು ಸುಂದರಮ್ಮ ನರ್ಸ್‌ಗೆ ಕೊಡುತ್ತಾರೆ. ಅಂದರೆ ಈ ಕಥೆಯಲ್ಲಿ ಒರಟಾಗಿದ್ದ ಕಲ್ಲಾಗಿದ್ದ ಸುಂದರಮ್ಮ ನರ್ಸ್ ಹೃದಯವನ್ನು ಈ ಪುಟ್ಟಮಗು ಹೇಗೆ ಬದಲಾಯಿಸಿತು ಮೃದುಮಾಡಿತ್ತು ಎಂಬುದನ್ನು ಈ ಕಥೆಯಲ್ಲಿ ಅರಿಯಬಹುದಾಗಿದೆ.[೧]

ಸುಂದರಮ್ಮ ನರ್ಸ್‌ಗೆ ಮದುವೆ, ಮಕ್ಕಳು ಎಂದರೆ ಎಲ್ಲಿಲ್ಲದ ಸಿಟ್ಟು ಕೋಪ ಬರುತ್ತಿತ್ತು. ಆದರೆ ಆ ಅನಾಥ ಮಗು ಈಕೆಯ ಮಡಿಲು ಸೇರಿ ಕನಿಷ್ಟ ಒಂದು ತಿಂಗಳಲ್ಲಿ ಅವಳ ಮನಸ್ಸು ಹೇಗೆ ಸಂವೇದನೆಗೆ ಒಳಪಟ್ಟು ಆ ಮಗುವಿನಿಂದ ದೂರವಿರಲು ಆಗುವುದೇ ಇಲ್ಲ ಎನ್ನುವಷ್ಟರಮಟ್ಟಿಗೆ ಗಮನಸೆಳೆಯಿತು. ತಾಯ್ತನ ಅಂದರೆ ಏನು? ಎಂಬುದನ್ನು ತಿಳಿಯಲು ಈ ಕಥೆಯಿಂದ ತಿಳಿಸುತ್ತದೆ. ಸಾಮಾಜಿಕವಾದ ರೀತಿಯಲ್ಲಿ ಅವಳು ಹೇಗೆ ಎಚ್ಚರಗೊಳ್ಳುತ್ತಾಳೆ. ಅವಳ ಜ್ಞಾನ ಎಲ್ಲವೂ ಮಗುವಿನಲ್ಲೇ ಹೇಗೆ ಯಾವ ರೀತಿ ಆಕರ್ಷಿತಳಾಗುತ್ತಾಳೆ. ಹೆಣ್ಣಿನ ಮನಸ್ಸು ಎಷ್ಟೇ ಕಠಿಣವಾದರೂ ಸಂದರ್ಭಕ್ಕೆ ಅವಳು ಮೃದುವಾಗುವುದು ಎಂಬುದನ್ನು ಈ ವಿಳಾಸವಿಲ್ಲದ ಮಗುವಿನಿಂದ ತಿಳಿಯಬಹುದು.

ಅನುಪಮಾ ಅವರ ಹಿತ್ತಲಗಿಡವೇ ಮದ್ದಾಯಿತು ಎಂಬ ಕಥೆಯಲ್ಲಿ ಮೂಡಿಬರುವ ಸಂಗತಿ ಎಂದರೆ ಒಂದು ಹೆಣ್ಣು ಸಾಮಾನ್ಯವಾಗಿದ್ದರೂ, ಸುಂದರವಾಗಿಲ್ಲದಿದ್ದರೆ ಅವಳನ್ನು ಮದುವೆಯಾಗುವುದಕ್ಕೆ ಬಂದ ವರಗಳು ಆಕೆಗೆ ಉಬ್ಬುಹಲ್ಲು, ಅವಳ ಮುಖ ಹೀಗಿದೆ ಆಗಿದೆ ಎಂದು ವರನ ಕಡೆಯವರು ಹಾಗೂ ವರಗಳು ಒಪ್ಪದಿದ್ದಾಗ ಆ ಹೆಣ್ಣು ಮಗಳಿಗೆ ಆಗುವ ನೋವು, ದುಃಖ, ನಿರಾಶೆ, ಆಕೆಯಲ್ಲಿ ಮೂಡುವ ತಳಮಳ ಅವರು ಒಪ್ಪುತ್ತಾರೋ ಅಥವಾ ಇಲ್ಲೋ ಎಂದು

---

೧. ವಿಳಾಸವಿಲ್ಲದ ಮಗು, ಪು. ೩೮.

ಗಾಬರಿಪಡುವಾಗ ವರನ ಕಡೆಯಿಂದ ಹುಡುಗಿ ಬೇಡ ಎಂದು ತಿಳಿಸಿದಾಗ ಅವಳಲ್ಲಿ ಉಂಟಾಗುವ ನೊವನ್ನು ತನ್ನ ಗೆಳತಿಯರಿಗೂ ಅಥವಾ ಆತ್ಮೀಯತೆ ಇದ್ದರೆ ತಾಯಿಯ ಬಳಿಯೋ ತನ್ನ ಅಳಲನ್ನು ತೋಡಿಕೊಳ್ಳುತ್ತಾಳೆ. ಈ ರೀತಿಯ ಸಂವೇದನೆಯನ್ನು ಎಷ್ಟು ಎಂದು ಹೇಳಿದರೂ ಸಾಲದು. ಅದೇ ರೀತಿಯಲ್ಲಿ ಈಕೆಯ ತಾಯಿ ತಂದೆಗೂ ಅಷ್ಟೇ ದುಃಖವು ತುಂಬಿರುತ್ತದೆ. ಯಾವ ಗಂಡೂ ಬಂದು ನೊಡಿದರೂ ಆ ಹುಡುಗಿಯನ್ನು ಒಪ್ಪದಿದ್ದಾಗ ಈ ಸುದ್ದಿಯನ್ನು ಹುಡುಗಿಯ ಕಿವಿಗೆ ಬಿದ್ದಾಗ ಮೂರ್ಛೆ ಹೋಗುತ್ತಾಳೆ. ಅದೇ ತರಹದಲ್ಲಿ ಎದೆಯೇ ಒಡೆದುಹೋಯಿತೇನೋ ಎನ್ನುವಂತೆ ಆಕೆಯ ತಾಯಿಯು ಕುಸಿದು ಬೀಳುವ ಪರಿ ಈ ಕಥೆಯಲ್ಲಿದೆ. ಈ ರೀತಿ ಇರುವಾಗ ಇವರ ದೂರದ ಸಂಬಂಧಿಕರು ಆದ ನಾಗರಾಜು ಈತನು ಇವರ ಮನೆಯಲ್ಲೇ ಇರುತ್ತಾನೆ. ವರ್ಕ್‌ಷಾಪ್‌ನ್ನಲ್ಲಿ ಕೆಲಸಸಿಕ್ಕಿರುತ್ತದೆ. ಹೀಗೆ ಹೋಗುವ ದಾರಿಯಲ್ಲೇ ಲೇಡಿ ಡಾಕ್ಟರ್ ಇದ್ದಾರೆ ಎಂದು ಶಾರದೆಗೆ ವಿಷಯ ತಿಳಿಸಿದಾಗ ಡಾಕ್ಟರ್ ಹತ್ತಿರ ನಾಗರಾಜನು ಶಾರದೆಯನ್ನು ಚಿಕಿತ್ಸೆಗೆ ಒಳಪಡಿಸಿದಾಗ ಆಕೆಯ ಮುಖ ಲಕ್ಷಣಗಳು ಹಾಗೂ ಭಾವನೆಗಳಿಂದ ಇವಳಿಗೆ ಮದುವೆಯಾದರೆ ಮಾತ್ರ ಮೂರ್ಛೆರೋಗ ವಾಸಿಯಾಗುವುದು ಎಂದು ಡಾಕ್ಟರ್ ಖಚಿತಪಡಿಸಿಕೊಂಡು ನಿಮ್ಮ ಮಾವನನ್ನು ಕಳುಹಿಸಿ ಎಂದು ಶಾರದೆಗೆ ತಿಳಿಸುತ್ತಾರೆ. ಆನಂತರ ಶಾರದೆಯ ಮಾವ ಬಂದಾಗ ಅವರಿಗೆ ವಿವರಗಳನ್ನೆಲ್ಲಾ ತಿಳಿಸಿದಾಗ ಆತನು ಶಾರದೆಯನ್ನು ವಿವಾಹವಾಗುತ್ತಾನೆ. ಅಂದರೆ ಮನದ ಇಂಗಿತವನ್ನು ತಿಳಿದು ಅದನ್ನು ಪರಿಹರಿಸುವ ನಿಟ್ಟಿನ್ನಲ್ಲಿ ಹಿತ್ತಲಗಿಡವೆ ಮದ್ದಾಯಿತು ಎಂಬ ಕಥೆಯನ್ನು ಅನುಪಮಾ ಅವರು ಇಲ್ಲಿ ಬರೆದಿದ್ದಾರೆ. ಸಂಬಂಧದ ಟೊಳ್ಳುತನಗಳು ಮುರಿದು ಬೀಳುವಂತದ್ದನ್ನು ಮದುವೆಯ ಮೂಲಕ ಅನುಪಮಾ ಅವರು ಸರಿಪಡಿಸುವುದು ಹೇಗೆ ಎಂಬುದನ್ನು ಇಲ್ಲಿ ತೋರಿಸಿಕೊಟ್ಟಿದ್ದಾರೆ.

"ಈ ಕಥೆಯಲ್ಲಿ ಒಂದು ಹೆಣ್ಣಿನ ಮನಃಸ್ಥಿತಿಯು ಸರಿಯಾಗಬೇಕಾದರೆ ಆಕೆಗೆ ಅವಳ ಆಸೆಯಂತೆ ಬಯಸಿದುದು ದೊರಕಿದಾಗ ಅವಳಲ್ಲಿ ಉಂಟಾಗುವ ಮಾನಸಿಕ ತೊಳಲಾಟಗಳು, ಮನೆಯ ಸ್ಥಿತಿಯು ಸರಿಪಡಿಸಬಹುದು. ಆದರೆ ಅವಳ ಇಷ್ಟದಂತೆ ನೆರವೇರದಿದ್ದಾಗ ಅವಳ ಸ್ಥಿತಿ ಏನಾಗಬಹುದು ಎಂಬುದೇ ಇಲ್ಲಿ ಸಾರಾಂಶ.

"ಕತ್ತಲು" ಕಥೆಯಲ್ಲಿ ಇದ್ದಕ್ಕಿದ್ದಂತೆ ಕುರುಡುತನಕ್ಕೆ ಒಳಗಾದ ನರಸಯ್ಯನು ತನ್ನ ಕುಟುಂಬದಲ್ಲಿ ಯಾರಿಗೂ ಬೇಡದವನಾಗಿ ಒದ್ದಾಡುತ್ತಿರುತ್ತಾನೆ. ಸಾಯುವಂತಹ ಮನಸ್ಸನ್ನು ಕೂಡ ಆತನು ಮಾಡುತ್ತಾನೆ. ಆದರೆ ಅವರ ಮನೆಯಲ್ಲಿ ಕೆಲಸಕ್ಕಿದ್ದ ಹುಡುಗಿಯ ಪ್ರೀತಿ ವಾತ್ಸಲ್ಯ ಆ ತಾತನಲ್ಲಿ ಸಾಯುವ ನಿರ್ಧಾರದಿಂದ ಹಿಂದಕ್ಕೆ

ಮರಳುವಂತೆ ಆತನ ಮನಸ್ಸು ಆಗುತ್ತದೆ. "ಮೌನ" ಕಥೆಯಲ್ಲಿ ಸಾವಿನ ಅಂಚಿನಲ್ಲಿರುವ ಕಾವೇರಿಯು ಕಥಾನಾಯಕಿ. ಇವಳ ಸಾವು ಹತ್ತಿರವಾದಂತೆ ಕುಟುಂಬದೊಂದಿಗಿನ ಇವಳ ಗಂಭೀರವಾದಂತಹ ರೋಗಗಳಿಗೆ ಒಳಗಾದವರ ದೃಷ್ಟಿಯಿಂದ ಬದುಕನ್ನು ನೋಡುವ ಪ್ರಯತ್ನ, ಅನುಪಮಾ ಅವರ ಕಥಾಸಾಹಿತ್ಯದಲ್ಲಿ ನಡೆದಿದೆ. ಇವರ ಕಥೆಗಳಲ್ಲಿ "ಜೀವಧಾನ" ಎಂಬುದು ಪ್ರಮುಖವಾದುದು. ಈ ಕಥೆಯಲ್ಲಿ ರೋಗಿಯೊಬ್ಬನ ಮಾನಸಿಕ ಸ್ಥಿತಿಯನ್ನು ಅರಿತ ಡಾಕ್ಟರ್ ಯಾವ ಇಂಜೆಕ್ಷನ್‌ಗೂ ವಾಸಿಯಾಗದ ಕಾಯಿಲೆ ಅದಾಗಿರುತ್ತದೆ. ಆದರೆ ಆತ ಮಗೂ, ಮಗೂ ಎಂದು ಕನವರಿಸುವುದನ್ನು ಗಮನಿಸಿದ ನರ್ಸ್ ಡಾಕ್ಟರಿಗೆ ವಿಷಯ ತಿಳಿಸಿದಾಗ ಆಕಾಶವೇ ತಲೆಮೇಲೆ ಬಿದ್ದಂತೆ ತಲೆನೋವಾಗಿದ್ದ ರೋಗಿಯ ಬಗ್ಗೆ ಈ ವಿಷಯವನ್ನು ತಿಳಿದಾಗ ಡಾಕ್ಟರ್ ಕಣ್ಣು ಅಗಲವಾಯಿತು ರೋಗಿಯ ಬಳಿಗೆ ಹೋಗಿ ನಿಮ್ಮ ಮಗು ಬದುಕಿದೆ, ನಿಮ್ಮ ಮಡದಿಯು ಅದನ್ನು ಆಸ್ಪತ್ರೆಗೆ ನಿಮ್ಮನ್ನು ನೋಡಲು ಒಟ್ಟಿಗೆ ಬರ ಹೇಳಿದ್ದೇನೆ ಎಂದು ತಿಳಿಸಿದಾಗ ಇಲ್ಲಾ ಡಾಕ್ಟ್ರೇ ನನ್ನ ಮಗು ಸತ್ತು ಹೋಯಿತು ಎನ್ನುತ್ತಾನೆ. ಆದರೆ ಡಾಕ್ಟರ್ ಇಲ್ಲ ನೀವು ನೋಡಿದಾಗ ಮಗು ಜ್ಞಾನ ತಪ್ಪಿತ್ತು ಅಷ್ಟಕ್ಕೆ ಸತ್ತುಹೋಯಿತು ಎಂದು ತಿಳಿದುಕೊಂಡಿದ್ದಿರಾ ಎಂದು ರೋಗಿಯ ಮನಸ್ಸಿನಲ್ಲಿ ಆಳವಾಗಿ ಬೇರೂರಿದ್ದ ಮಗು ಎಂಬ ಮಾನಸಿಕ ಖಾಯಿಲೆಯನ್ನು ಬೇರೊಂದು ಆಸ್ಪತ್ರೆಯ ಮಗುವೇ ನಿಮ್ಮದು ಎಂದು ನಂಬಿಸಿ ಆತನ ರೋಗವನ್ನು ವಾಸಿ ಮಾಡುವುದು ಆತನಿಗೆ ಹೋಗುವ ಜೀವವನ್ನು ಉಳಿಸುವ ಡಾಕ್ಟರ್ ನಿಜಕ್ಕೂ ಎರಡನೇ ದೇವರು ಎಂಬುದನ್ನು ಅನುಪಮಾ ಅವರು ಇಲ್ಲಿ ಚಿತ್ರಿಸಿದ್ದಾನೆ. ಸಂಬಂಧವೂ ಇಲ್ಲಿ ಬದಲಾಯಿಸಿಕೊಳ್ಳುತ್ತದೆ, ಇದಕ್ಕೆ ಅಪವಾದವೆಂಬಂತೆ ಸಿದ್ದವ್ವ ಪ್ರೀತಿಯಿಂದ ನೋಡಿಕೊಳ್ಳುತ್ತಾಳೆ, ರಕ್ತಸಂಬಂಧ ಹೊಂದಿದ ಮಕ್ಕಳು, ಗಂಡ ಎಲ್ಲರೂ ಇವಳ ಸಾವು ಸಮೀಪಿಸುವುದನ್ನೇ ತಮ್ಮ ಅತಿಯಾದ ಸ್ವಾರ್ಥಕ್ಕಾಗಿ ದುರಾಸೆಗಾಗಿ ಎದುರು ನೋಡುತ್ತಾರೆ. ಇದು ವ್ಯವಹಾರಿಕ ಸಂಬಂಧದ ಕುರಿತಾಗಿ ಕಾಣುತ್ತದೆ, ಅದೇ ಸಿದ್ದವ್ವನಿಗಿದ್ದ ಕಾವೇರಕ್ಕನ ಬಗೆಗಿನ ಪ್ರೀತಿ, ಮಮಕಾರ, ವಾತ್ಸಲ್ಯಗಳು ನಿಜಕ್ಕೂ ಹೇಳತೀರದು.

ಈ ಸಾಮಾಜಿಕ ವ್ಯವಸ್ಥೆಯಲ್ಲಿ ಒಂದು ಹೆಣ್ಣು ಆ ಕುಟುಂಬಕ್ಕಾಗಿ ಕಷ್ಟಪಟ್ಟು ದುಡಿದು ಮಕ್ಕಳು ಮತ್ತು ಗಂಡನನ್ನು ಸಾಕಿ ಸಲುಹಿದ ಈಕೆಗೆ ಸಾಯುವಂತಹ ಕಾಯಿಲೆ ಬಂದಾಗ ದಿನಗಳನ್ನು ಎಣಿಸುತ್ತಿರುವ ಈ ಹೆಣ್ಣಿಗೆ ಸಾಯುವತನಕ ಪ್ರೀತಿ, ಕರುಣೆಗಳನ್ನು ಆದರದಿಂದ ತೋರಿಸದೆ ಅವಳು ಸಾಯುವ ದಿನವನ್ನೇ ಕಾಯುವ ಈ

ಸಂಸಾರವನ್ನು ನೋಡಿದಾಗ ಇವತ್ತಿನ ಜನತೆಯ ಮನದಲ್ಲಿ ಹೇಗೆ ಪ್ರತಿಕ್ರಿಯೆಯೇ ಉಂಟಾಗುತ್ತದೆ ಎಂಬುದನ್ನು ತಿಳಿಯುವುದಲ್ಲದೆ ಒಂದು ಹೆಣ್ಣಿನ ನೋವು ಈ ಕುಟುಂಬಕ್ಕೆ ಅರ್ಥವಾಗುವುದಿಲ್ಲ, ಬದಲಾಗಿ ಆಕೆಯ ಆಸ್ತಿ, ಹಣದ ಮೇಲೆ ಇವರೆಲ್ಲರ ಕಣ್ಣು ಬೀಳುತ್ತದೆ. ಅವಳು ಬೇಗ ಸತ್ತರೆ ಎಲ್ಲವನ್ನು ನಾವು ಪಡೆಯಬೇಕೆಂಬ ದುರಾಸೆಯನ್ನು ನಾವು ಈ ಕಥೆಯಲ್ಲಿ ಕಾಣುತ್ತಿದ್ದೇವೆ. ಅದೇ ರೀತಿ ಸಿದ್ದವ್ವ ಕಾವೇರಕ್ಕನನ್ನು ಪ್ರೀತಿಯಿಂದ ನೋಡಿಕೊಳ್ಳುತ್ತಾಳೆ. ಅದೇ ಸಾಮಾಜಿಕ ಪ್ರಜ್ಞೆ ಹೇಗೆ ಎಂದು ತಿಳಿಯುವುದು.

ಹಿಂದೆ ಹೆಣ್ಣು ಹಲವಾರು ಸಂಕೋಲೆಗಳಿಗೆ ಗುರಿಯಾಗಬೇಕಾಗಿತ್ತು, ಅಂದರೆ ಹೆಣ್ಣು ಋತುಮತಿಯಾದ ಮೇಲೆ ಆಕೆ ಮನೆಯ ಹೊಸ್ತಿಲನ್ನು ತುಳಿಯಬಾರದು, ಯಾವ ವಸ್ತುವನ್ನು ಮುಟ್ಟಬಾರದು, ಮುಟ್ಟಿದರೂ ಅದು ಮುಟ್ಟು, ಮನೆಯಲ್ಲಿ ಅಶುಭ ಉಂಟಾಗುತ್ತದೆ ಎಂದು ಆಕೆಯ ಮುಖವನ್ನು ನೋಡಬಾರದು, ಯಾವ ಶುಭಕಾರ್ಯಗಳು ನಡೆಯುವುದಿಲ್ಲ, ನಾಲ್ಕು ಗೋಡೆಗಳ ಮಧ್ಯೆ ಬಿಳಿಯ ಸೀರೆ ಧರಿಸಿ ಇರಬೇಕು ಎಂಬೆಲ್ಲಾ ಘೋಷಣೆ ಷರತ್ತುಗಳು ಇದ್ದವು, ಇದಕ್ಕಾಗಿ ನಮ್ಮಲ್ಲಿ ಸಾಮಾಜಿಕ ಸುಧಾರಕರು ಹೋರಾಟವನ್ನೇ ಮಾಡಿದರೂ, ಅಂದರೆ ವಿಧವೆಯಾದ ಹೆಣ್ಣು ಗಂಡ ಸತ್ತಮೇಲೆ ಅವನ ಜೊತೆಯಲ್ಲಿಯೇ ಚಿತೆಗೆ ಹಾರಬೇಕು ಇದರಿಂದ ಅವಳಿಗೂ ಸದ್ಗತಿ ದೊರಕುತ್ತದೆ ಎಂದು ಹೇಳಿ ಅವಳೂ ಚಿತೆಗೆ ಹಾರಿ ಪ್ರಾಣಬಿಡುತ್ತಿದ್ದಳು, ಇದನ್ನು ಕಣ್ಣಾರೆ ಕಂಡ ರಾಜಾರಾಂ ಮೋಹನ್‌ರಾಯ್ ರವರು ಬ್ರಿಟಿಷರ ಸಹಾಯ ಪಡೆದು ೧೮೨೯ರಲ್ಲಿ ಕಾನೂನು ಜಾರಿಗೆ ತರುತ್ತಾನೆ. ಅದೇ ಸತಿ ಸಹಗಮನ ಪದ್ಧತಿ ವಿಧವೆಯನ್ನು ಗಂಡ ಸತ್ತ ಮೇಲೆ ಚಿತೆಗೆ ಹಾರುವಂತೆ ಪ್ರಚೋದಿಸುವವರನ್ನು ಶಿಕ್ಷೆಗೆ ಗುರಿಪಡಿಸಲು ಕಾಯ್ದೆ ಜಾರಿಗೆ ಬಂದ ಮೇಲೆ ಈ ರೀತಿಯ ಪದ್ಧತಿಯು ನಿಧಾನವಾಗಿ ಕಡಿಮೆಯಾಗುತ್ತಾ ಕೊನೆಗೆ ಅದರ ನಿರ್ಮೂಲನೆಯು ಆಗಿ ಬಂತು, ಹೆಣ್ಣಿಗೆ ಹೆಣ್ಣೇ ಶತ್ರು ಎಂಬುದು ಇದರಲ್ಲಿ ನಾವು ತಿಳಿಯಬಹುದು, ಅಂದರೆ ಅವಳು ಮಗಳಿರಲಿ, ಸೊಸೆಯಿರಲಿ ಗಂಡಸತ್ತಾಗ ಚಿತೆಗೆ ಹಾರುವಂತೆ ಪ್ರಚೋದಿಸುತ್ತಿದ್ದರು ಶಿಕ್ಷೆಯು ಯಾವಾಗ ಜಾರಿಗೆ ಬಂತೋ ಈ ರೀತಿಯ ಪ್ರಚೋದಿಸುವಿಕೆಯು ಕಡಿಮೆಯಾಗುತ್ತಾ ಬಂದಿತು.

ಋತುಮತಿಯಾದ ಹೆಣ್ಣನ್ನು ಮನೆಯ ಹೊರಗಿನ ಹಿತ್ತಲಲ್ಲಿ ಇರಬೇಕಾದ ಪ್ರಸಂಗ ಇತ್ತು, ಆದರೆ ಆಕೆಯು ತಿಂಗಳ ಕೊನೆಯಲ್ಲಿ ಅವಳಿಗೆ ವಿಶ್ರಾಂತಿ ಬೇಕಾಗಿದೆ. ಅವಳು ಒಬ್ಬ ಮನುಷ್ಯಳಲ್ಲವೇ? ಎಂಬ ಮನೋಭಾವ ಆವೊಂದು ಕಾಲದ

ಹೆಂಗಸರಿಗೆ ಅರ್ಥವಾಗುತ್ತಲೆ ಇರಲಿಲ್ಲ, ಅವರಿಗೆ ಆಚಾರ ರೂಢಿ, ಸಂಪ್ರದಾಯ, ನಂಬಿಕೆಗಳನ್ನೇ ವಸ್ತುವಾಗಿಟ್ಟುಕೊಂಡು ಬಂದಿದ್ದ ಕಾಲದಲ್ಲಿಯೇ ಅನುಪಮರವರು ಈ ಸ್ಥಿತಿಯನ್ನು ಮುರಿದು ಹೆಣ್ಣು ಹೊರ ಬರಬೇಕು ಎಂಬುದು ತಿಳಿಯುವಂತೆ ತಮ್ಮ ಕಥಾ ಸಂಕಲನದಲ್ಲಿ ಬರೆದಿದ್ದಾರೆ, ಅದೇ ರೀತಿಯಲ್ಲಿ ಮೈನೆರೆದ ಹೆಣ್ಣು ಹೊರಗೆ ಹೋಗಬಾರದು, ಅವಳು ಹೆಚ್ಚು ವಿದ್ಯೆ ಕಲಿಯುವುದು ತಪ್ಪು, ಗಂಡಿನ ವಿರುದ್ಧವಾಗಿ ಮರು ಮಾತಾಡಬಾರದು, ಹಾಗೆಯೇ ಪತಿಯೇ ಪರದೈವ ಎಂಬುದು ಅದೇ ರೀತಿಯಲ್ಲಿ ಮದುವೆಯಾದ ಹೆಣ್ಣು ಮಗಳು ಅತ್ತೆಯ ಮನೆಯಲ್ಲಿ ಅತ್ತೆ ಹೇಳಿದ್ದನ್ನೇ ಮಾಡಬೇಕು, ನಾಲ್ಕು ಗೋಡೆಯ ಮಧ್ಯೆ ಕಸಮುಸುರೆ ತಿಕ್ಕಿಕೊಂಡು ಜೀವನ ನಿರ್ವಹಣೆ ಮಾಡಿಕೊಂಡು ಹೋಗಬೆಕು ಎಂಬುದನ್ನೆಲ್ಲಾ ಅಂದಿನ ಮಹಿಳೆಯರು ಅನುಭವಿಸಬೇಕಾದ ಸ್ಥಿತಿಯಿತ್ತು, ಹಾಗೆಯೇ ಹೆಣ್ಣು ಸಂಸಾರಕ್ಕೆ ತೊಡಗಿದ ಮೇಲೆ ಆಕೆಯ ಜಿವನ ತುಂಬಾ ನರಕದಲ್ಲಿತ್ತು ಎಂಬುದನ್ನು ಒಳಹೊಕ್ಕಿ ನೊಡಿದಾಗ ತುಂಬಿದ ಸಂಸಾರದಲ್ಲಿ ಅತ್ತಿಗೆ, ನಾದಿನಿ, ಮೈದುನರು, ವಾರಗಿತ್ತಿಯರು, ಬಾವಂದಿರು, ಮಕ್ಕಳು ಎಲ್ಲರನ್ನೂ ಸೊಸೆಯಾದವಳು ಅವರುಗಳ ಕೆಲಸಗಳು ಹಾಗೂ ಅವರ ಕಾರ್ಯಗಳೆಲ್ಲವನ್ನೂ ಈಕೆಯೇ ಮಾಡಿಕೊಂಡು ಹೋಗಬೇಕಾದ ಸ್ಥಿತಿಯಿತ್ತು, ಅವಳ ಕೈಯಲ್ಲಿ ಆಗದಿದ್ದರೂ ಅದನ್ನೇ ಅನಿವಾರ್ಯವಾಗಿ ಮಾಡಬೇಕಿತ್ತು, ಅಂದರೆ ಮಾಡದಿದ್ದ ಪಕ್ಷದಲ್ಲಿ ಅಥವಾ ಅವರುಗಳ ಎದುರಿಗೆ ಮರುಮಾತಾಡಿದರೆ ಅವಳಿಗೆ ಮನೆಮಂದಿಯು ಅಲ್ಲದೆ ಗಂಡನೂ ಸೇರಿಕೊಂಡು ಕೊಡುವ ದೈಹಿಕ ಹಿಂಸೆ, ಚಾಟಿ ಏಟು, ಬೈಗುಳದ ಮಾತುಗಳು ಎಲ್ಲವನ್ನು ಸಹಿಸಿಕೊಂಡು ಮೂಕ ಪ್ರಾಣಿಯಂತೆ ಹೊಗಬೇಕಾದ ಸ್ಥಿತಿಯಿತ್ತು, ಇದಕ್ಕೆಲ್ಲಾ ಕಾರಣ ತಂದೆ–ತಾಯಿ ಉಪದೇಶ ಒಂದೆಡೆ ಯಾರ ಎದುರಿಗೂ ಹಿಂತಿರುಗಿ ಮಾತಾಡಬೇಡ ನಿನ್ನ ತಂಗಿಯರು ಮದುವೆಯಾಗ ಬೇಕಿದೆ. ತಂದೆಯ ಮನೆಗೆ ಅಪಕೀರ್ತಿ ಬರದಂತೆ ಮದುವೆಯಾದವಳು ಕೊಟ್ಟ ಹೆಣ್ಣು ಕುಲಕ್ಕೆ ಒರಗು ಎಂಬ ಗಾದೆಯಂತೆ ನಡೆದುಕೊಳ್ಳಬೇಕು ಇದೆಲ್ಲವನ್ನು ತಿಳಿದ ಈ ಹೆಣ್ಣು ಮಗಳು ಏನೇ ಕಷ್ಟಬಂದರೂ ಸಹಿಸಿಕೊಂಡು ಜೀವನ ಮಾಡಬೇಕಾದ ಸ್ಥಿತಿ ಇತ್ತು, ಇದರಿಂದಾಗಿ ಗಂಡನ ಮನೆಯವರು ಕಾಲಲ್ಲಿ ತೋರಿಸಿದ ಕೆಲಸವನ್ನು ಕೈಯಲ್ಲಿ ನಿಷ್ಠೆಯಿಂದ ಮಾಡಿದರೂ ಒಪ್ಪದ ಅತ್ತೆಮಾವಂದಿರು ಅವಳು ಅವರೆದುರಿಗೆ ಎಷ್ಟೇ ಮೆಚ್ಚಿನ ಸೊಸೆಯಾಗಬೇಕೆಂದಿದ್ದರು ಅವರು ಕೇವಲವಾಗಿಯೇ ಕಾಣುತ್ತಿದ್ದರು, ಕಾಲಕ್ರಮೇಣ ನಾಗರೀಕತೆ ಬೆಳೆದಂತೆ ಹೆಣ್ಣು ಸ್ವಲ್ಪಸ್ವಲ್ಪವಾಗಿ ಮನೆಯವರ ಮನವೊಲಿಸಿ ವಿದ್ಯೆಯನ್ನು ಹಾಗೂ ಮಾತಿನಿಂದ ನಯವಾಗಿ ಎಲ್ಲರ ಮನವನ್ನು ಗೆದ್ದು ಹೆಣ್ಣು

ಇಡೀ ಕುಟುಂಬದ ಕಣ್ಣು ಎಂಬುದನ್ನು ಅವಳ ಬದಲಾವಣೆಗಳಿಂದ ಮನೆಯಲ್ಲಿ ಹೊಸ ಬದಲಾವಣೆಗಳು ಬಂದಾಗ ಪ್ರತಿಯೊಬ್ಬರಲ್ಲೂ ಏನೋ ಒಂದು ರೀತಿಯ ಹೊಸತನಗಳು ಬರಲು ಪ್ರಾರಂಭವಾದಾಗ ಇದೆಲ್ಲವನ್ನು ಹೆಣ್ಣು ಕಲಿಸುತ್ತಾ ಬಂದಳು. ಆದರೆ ಗಂಡು ಹೆಣ್ಣಿನ ಶ್ರೇಯಸ್ಸಿಗೆ ಪ್ರೋತ್ಸಾಹ ಕೊಡದೆ ಇದ್ದ ಕಾಲದಲ್ಲಿಯೂ ಅದೆಲ್ಲವನ್ನೂ ಸೂಕ್ಷ್ಮವಾಗಿ ಗಮನಿಸಿ ಅವರಿಗೆ ಎದುರಾಗಿ ತಾನು ಮೇಲೆ ಬರಬೇಕು, ಗಂಡಿಗೆ ಹೆಣ್ಣು ಸಮ ಅಕ್ಕಮಹಾದೇವಿ, ಬಸವಣ್ಣನವರೂ ಕೂಡ ಆ ಕಾಲದಲ್ಲಿ ಲಿಂಗ ಸಮಾನತೆಗಾಗಿ ಹೋರಾಡಿದರು ಇದೆಲ್ಲವನ್ನು ಅನುಪಮಾರವರು ಆ ಕಾಲದಲ್ಲಿಯೇ ಬರೆದಿದ್ದರು ಎಂದರೆ ಇಂದಿನ ಜನತೆಗೂ ಅನ್ವಯವಾಗುವಂತೆ ತಮ್ಮ ಕಥಾಸಂಕಲನದಲ್ಲಿ ಬಿತ್ತರಿಸುತ್ತಾ ಹೋಗುತ್ತಾರೆ, ಈ ಹಂತದಿಂದ ನಮಗೂ ಮತ್ತು ಶೋಷಣೆಯ ಸ್ಥಿತಿಗತಿಗೆ ಕಾರಣವಾದ ಶಕ್ತಿಗಳಿಗೂ ಇರಬಹುದಾದ ಮಾನಸಿಕ ಸಂಬಂಧದ ಎಳೆಗಳು ಕತ್ತರಿಸಲ್ಪಡುತ್ತದೆ, ಶೋಷಣೆಗೆ ಪರಸ್ಪರ ಪೂರಕವಾಗಿ ಸಾಮಾಜಿಕ, ರಾಜಕೀಯ, ಧಾರ್ಮಿಕ, ಯಾವುದೇ ಆಗಿರಲಿ ಈ ಒಂದೊಂದು ಶಕ್ತಿಯೂ ಪ್ರತ್ಯೇಕವಾಗಿ ಅಥವಾ ಸಾಮಾಜಿಕವಾಗಿ ಬೇರೆ ಸ್ಥಿತಿಗಳಿಗೆ ಕಾರಣವಾಗಿರಬಹುದು, ವಿಚಾರಗಳು ಇದೇ ರೀತಿ ಬೆಳೆಯುತ್ತ ಬಂದಾಗ ಈ ಎಲ್ಲ ಶಕ್ತಿಗಳು ಪ್ರತಿಭಟನೆಗೆ ಅರ್ಹವಾದ ವರ್ಗಕ್ಕೆ ಸೇರುತ್ತವೆ.

ಅನುಪಮಾ ಅವರಿಗೆ ಸಮಾಜದ ಬಗೆಗೆ ದಟ್ಟವಾದ ಅನುಭವ ಇರುವುದರಿಂದ ಸ್ವತಃ ಅವರ ಜೀವನದಲ್ಲೆ ಅವರು ಈ ಸಮಾಜ ವ್ಯವಸ್ಥೆಯ ಅನೇಕ ಕಂದಾಚಾರಗಳನ್ನು ಮುರಿದು ಕೊನೆಗಾಣಿಸಲು ಬಂದದ್ದರಿಂದ ಆ ರೀತಿಯ ಆರೋಗ್ಯಪೂರ್ಣ ಮನಸ್ಸು ಕಟ್ಟಿಕೊಡುವ ಆಶಯ, ಧೋರಣೆ, ಕಥೆಯಲ್ಲಿನ ವಸ್ತು, ನಿಜಕ್ಕೂ ನವ ಸಮಾಜದ ಬೆಳವಣಿಗೆ ಆಶಾದಾಯಕವಾಗಿದೆ, ಇವರ ಅನೇಕ ಕಥಾ ಸಂಕಲನದಲ್ಲಿ ಸಾಮಾಜಿಕ ಪ್ರಜ್ಞೆ ದಟ್ಟವಾಗಿ ಹರಡಿದೆ.

*****

# ಅಧ್ಯಾಯ – ೫

# ಅನುಪಮಾ ನಿರಂಜನ ಅವರ ವೃತ್ತಿ ಬದುಕು

ಅನುಪಮಾ ಅವರು ವೃತ್ತಿಯಿಂದ ವೈದ್ಯೆಯಾಗಿದ್ದವರು. ಹಿಂದೆ ವೈದ್ಯಕೀಯ ಕ್ಷೇತ್ರದಲ್ಲಿ ಮಹಿಳೆಯರು ಪ್ರವೇಶಿಸುತ್ತಿದ್ದುದೇ ತುಂಬಾ ಕಡಿಮೆ. ಅದರಲ್ಲೂ ಸಾಮಾನ್ಯ ಮಹಿಳೆಯರು ಉನ್ನತ ಶಿಕ್ಷಣ ಪಡೆಯುವುದು ತುಂಬಾ ಕಡಿಮೆಯಿದ್ದರು, ಹಾಗೆಯೇ ಉನ್ನತ ವರ್ಗದವರಿಗೆ ಮಾತ್ರಾ ಉನ್ನತ ವಿದ್ಯಾಭ್ಯಾಸ ಸಾಧ್ಯವಾಗಿದ್ದ ಕಾಲವದು. ಆ ಕಾಲದಲ್ಲಿಯೇ ಅನುಪಮಾರವರು ವೈದ್ಯಕೀಯ ಕ್ಷೇತ್ರವನ್ನು ಆಯ್ದುಕೊಂಡರು, ಅವರು ಪಡೆದಂತಹ ಶಿಕ್ಷಣವನ್ನು ಸರಿಯಾದ ರಿತಿಯಲ್ಲಿ ಉಪಯೋಗಿಸಿಕೊಂಡುದುದಲ್ಲದೇ ಕನ್ನಡಿಗರಿಗೆ ಅವರು ತಿಳಿದಿದ್ದ ಬುದ್ಧಿವಂತಿಕೆಯನ್ನು ಧಾರೆಯೆರೆದರು. ಅವರು "ತಾಯಿ–ಮಗು" ಕೃತಿಯನ್ನು ಬರೆದರು. ಪ್ರಾರಂಭದಲ್ಲಿ "ಕರ್ಮವೀರ" ಪತ್ರಿಕೆಯಲ್ಲಿ ಧಾರಾವಾಹಿಯಾಗಿ ಪ್ರಾರಂಭವಾಯಿತು. "ಕೆಂಪಮ್ಮನ ಮಗು", "ಕೇಳು–ಕಿಶೋರಿ", "ಆರೋಗ್ಯ ದರ್ಶನ", "ಸ್ತ್ರೀಸ್ವಾಸ್ಥ್ಯ ಸಂಹಿತೆ", "ಶಿಶುವೈದ್ಯದೀಪಿಕೆ", "ಆಹಾರದಿಂದ ಆರೋಗ್ಯ", "ಒತ್ತಡದ ಬೇನೆಗಳು", "ಕ್ಯಾನ್ಸರ್ ಜಗತ್ತು", ಹೀಗೆ ಹಲವಾರು ಪುಸ್ತಕಗಳನ್ನು ಹೊರತಂದಿದ್ದಾರೆ.

ವೈದ್ಯೆಯಾಗಿದ್ದ ಅನುಪಮಾ ಅವರು ಸಾಕಷ್ಟು ತಮ್ಮ ವೃತ್ತಿಯಿಂದ ಪ್ರಸಿದ್ಧರಾಗಿದ್ದರು, ಧಾರಾವಾಡ ಹಾಗೂ ಬೆಂಗಳೂರು ಎರಡು ಕಡೆಗಳಲ್ಲಿ ಆಸ್ಪತ್ರೆಗಳನ್ನು ತೆರೆದಿದ್ದು, ಇವು ತುಂಬಾ ವೇಗವಾಗಿ ನಡೆಯುತ್ತಿದ್ದವು. ಅನುಪಮಾ ಅವರು ಜನರಿಗೆ ಅರಿವನ್ನು ಮೂಡಿಸಲು ಪತ್ರಿಕೆಗಳ ಮೂಲಕ ನೀಡುತ್ತಿದ್ದ ಸಲಹೆಗಳು ತುಂಬಾ ಉಪಯುಕ್ತವಾದವುಗಳಾಗಿತ್ತು. ವೈದ್ಯಕೀಯ ಚಿಕಿತ್ಸೆಯಲ್ಲಿ ತುಂಬಾ ನಂಬಿಕೆ ಇತ್ತು. ಅದೇ ರೀತಿ ಈ ವೃತ್ತಿಯಿಂದ ಜನಸಂಪರ್ಕಗಳು ಜೀವನದ ಅನುಭವಗಳಿಂದಾಗಿಯೇ ಅವರ ಸಾಹಿತ್ಯಕ್ಕೆ ಸಾಕಷ್ಟು ಉತ್ತೇಜನವನ್ನು ತಂದುಕೊಟ್ಟಿತ್ತು ಎಂದು ಹೇಳಿದರೆ ತಪ್ಪಾಗಲಾರದು, ಹಾಗೆಯೇ ಅನುಪಮಾ ಅವರ ಸಾಹಿತ್ಯ ಕೃತಿಗಿಂತಲೂ ವೈದ್ಯಕೀಯ ಕೃತಿಗಳು ಹೆಚ್ಚು ಮುದ್ರಣಗಳನ್ನು ಕಂಡಿವೆ. ಅವರ ವೈದ್ಯಕೀಯ ಬದುಕಿನಲ್ಲಿ ಎರಡು ರೀತಿಯ ಕೃತಿಗಳನ್ನು ನಾವು ಕಾಣಬಹುದಾಗಿದೆ, ಅವುಗಳೆಂರೆ ೧) ಆರೋಗ್ಯಕ್ಕೆ ಸಂಬಂಧಿಸಿದವು ೨) ಸ್ತ್ರೀಯರ ಆರೋಗ್ಯಕ್ಕೆ ಸಂಬಂಧಿಸಿದ ಕೃತಿಗಳು, ಅದರಲ್ಲಿ ಆಹಾರದಿಂದ ಆರೋಗ್ಯವನ್ನು ನೋಡಿದಾಗ ಸಂಜೀವಿನಿ, ನಮ್ಮ ದೇಹದ ಎಲ್ಲಾ ಕಾರ್ಯಚಟುವಟಿಕೆಗಳಿಗೂ ಆಹಾರವೇ ಮೂಲ ಶಕ್ತಿ,

ನಾವು ಓದುವುದು, ಬರೆಯುವುದು, ದೈಹಿಕ ಕ್ರಿಯೆಗಳಿಗೆ ಉಸಿರಾಟ, ಪಚನಕ್ರಿಯೆ ಹೀಗೆ ಮುಂತಾದವುಗಳಿಗೆ ಆಹಾರವೇ ಮೂಲ ಆಧಾರ. ಪಚನಕ್ರಿಯೆ ಹೀಗೆ ಮುಂತಾದವುಗಳಿಗೆ ಆಹಾರವೇ ಮೂಲ ಆಧಾರ, 'ಊಟಬಲ್ಲವನಿಗೆ ರೋಗವಿಲ್ಲ, ಮಾತುಬಲ್ಲವನಿಗೆ ಜಗಳವಿಲ್ಲ" ಎಂಬ ಗಾದೆಯಂತೆ ನಮಗೆ ಆಹಾರದ ಬಗ್ಗೆ ತಿಳಿದುಕೊಳ್ಳಬೇಕಾದುದು ಅಗತ್ಯ ನಮ್ಮ ಹಿಂದಿನ ಹಿರಿಯರು ಆಹಾರದ ಪೌಷ್ಠಿಕಾಂಶಗಳ ಬಗ್ಗೆ ತುಂಬಾ ತಿಳುವಳಿಕೆಯುಳ್ಳವರಾಗಿದ್ದರು ಯಾಕೆಂದರೆ, ಅವರು ಕಡಲೇಬೇಳೆ, ಹೆಸರುಬೇಳೆ ಕೊಸಂಬರಿ, ಪಾಯಸ, ಖೀರು ಇವೆಲ್ಲವನ್ನು ಆಗಾಗ್ಗೆ ತಯಾರಿಸಿ ಊಟದ ಜೊತೆಯಲ್ಲಿ ಸೇವಿಸುತ್ತಿದ್ದರು. ಇದರಿಂದಾಗಿ ಅವರ ದೇಹದಲ್ಲಿ ಶಕ್ತಿಯುಂಟಾಗಿ ದೃಢಕಾಯರಾಗುತ್ತಿದ್ದರು, ಆದರೆ ಇಂದಿನ ಜನ ಕೆಲಸದ ಒತ್ತಡದಿಂದ ಅವರು ತಯಾರಿಸಿ ತಿನ್ನುವ ಅಹಾರ ಶಕ್ತಿಯುತವಾದುದು ಅಲ್ಲವಾಗಿದ್ದರಿಂದ ಈಗಿನ ಜನರು ಸಾಕಷ್ಟು ಪ್ರಮಾಣದಲ್ಲಿ ನಿಶ್ಯಕ್ತರು ಎಂದು ಹೇಳಬಹುದಾಗಿದೆ, ಹಾಗಾಗಿ ನಾವು ಸಮತಟ್ಟಾದ ಆಹಾರದಲ್ಲಿ ಐದು ಮುಖ್ಯಾಂಶಗಳು ಶರ್ಕರಪಿಷ್ಠ, ಸಸಾರಜನಕ, ಕೊಬ್ಬು, ವಿಟಮಿನ್‌ಗಳು, ಖನಿಜಾಂಶಗಳು, ದ್ವಿದಳದಾನ್ಯ, ಗೆಡ್ಡೆಗೆಣಸು, ಒಣಗಿದ ಹಣ್ಣು ಇಂತಹವುಗಳನ್ನು ಅಹಾರದಲ್ಲಿ ನಿಯಮಿತವಾಗಿ ಸೇವಿಸುವುದರಿಂದ ಮೊಟ್ಟೆ, ಮೀನು, ಮಾಂಸ, ಎಣ್ಣೆಬೀಜ ಕಾಯಿಬೀಜಗಳಲ್ಲಿ ಯಥೇಚ್ಛವಾಗಿರುತ್ತದೆ, ಇವುಗಳನ್ನೆಲ್ಲಾ ಸೇವಿಸುವುದರಿಂದ ದೇಹದ ಬೆಳವಣಿಗೆ ಹಾಗೂ ಸವೆದ ಭಾಗಗಳನ್ನುಸರಿಪಡಿಸುವಿಕೆಗೆ ಬೇಕಾಗುವ ಅಂಶ ಇದರಲ್ಲಿ ದೊರಕುತ್ತದೆ, ಆದುದರಿಂದ ಇಂತಹ ಆಹಾರಗಳನ್ನು ತೆಗೆದುಕೊಳ್ಳುವುದು ಆರೋಗ್ಯಕ್ಕೆ ತುಂಬಾ ಉತ್ತಮವಾದುದು. ಲ್ಯಾಬೋರೇಟರಿಯ ಅದ್ಭುತಗಳಲ್ಲಿಯೂ ಆಹಾರ ವಸ್ತುಗಳು ಸೇವಿಸಿದ ಮೇಲೆ ಹೇಗೆ ಜೀರ್ಣವಗಿ ರಕ್ತಗತವಾಗುತ್ತವೆ ಎಂಬುದರ ತಿಳುವಳಿಕೆ ಒಳ್ಳೆಯ ಆಹಾರ ಈ ದಿನದಲ್ಲಿ ಯಾವ ರೀತಿ ಉಪಯುಕ್ತವಾಗುತ್ತದೆ ಎನ್ನುವ ತಿಳಿವಳಿಕೆ ಇವತ್ತಿನ ಸ್ಥಿತಿಯಲ್ಲಿ ಪ್ರತಿಯೊಬ್ಬರಿಗೂ ಗೊತ್ತಿರಬೇಕು, ಪ್ರಮಾಣ ಮತ್ತು ವೈವಿಧ್ಯದಲ್ಲಿ ಎಲ್ಲ ವಯೋಮಾನದವರಿಗೂ ಏಕ ಬಗೆಯ ಆಹಾರವನ್ನು ಕೊಡಬೇಕೇ ಬೇಡವೇ ಎಂಬುದು ಮುಖ್ಯವಾದುದು, ವ್ಯಕ್ತಿಯ ವಯಸ್ಸು ದೇಹಸ್ಥಿತಿ, ಬೆಳೆಯುವ ಮಕ್ಕಳಿಗೆ, ಗರ್ಭಿಣಿಯರಿಗೆ, ಬಾಣಂತಿಯರಿಗೆ ಸಸಾರಜನಕದ ಅಂಶ ಜಾಸ್ತಿ ಬೇಕು, ದೇಹವನ್ನು ದಂಡಿಸಿ ದುಡಿಯುವವರಿಗೆ ಹೆಚ್ಚು ಶರ್ಕರಪಿಷ್ಠ ಅಗತ್ಯ, ಆರೋಗ್ಯ ಎಷ್ಟು ಮುಖ್ಯವೋ ಅದಕ್ಕೆ ವಿರುದ್ಧವಾಗಿ ಅನಾರೋಗ್ಯವು ಅಷ್ಟೇ ಪ್ರಮಾಣದಲ್ಲಿ ಸಂಭವಿಸುವ ಸಾಧ್ಯತೆಯಿರುತ್ತದೆ. ಪೌಷ್ಠಿಕಾಂಶವುಳ್ಳ ಯಾವುದೇ ಆಹಾರದ ಪ್ರಮಾಣ ಕಡಿಮೆಯಾದರೂ ಒಂದಲ್ಲ ಒಂದು

ರೀತಿಯ ಕಾಯಿಲೆ ಅಥವಾ ರೋಗಕ್ಕೆ ಗುರಿಯಾಗುತ್ತೇವೆ. ಆದುದರಿಂದ ಆಹಾರವನ್ನು ಸಮಪ್ರಮಾಣದಲ್ಲಿ ಸೇವನೆ ಮಾಡುವುದು ಅಗತ್ಯ ಹೀಗೆ ಆರೋಗ್ಯ ಅನಾರೋಗ್ಯಗಳೆರಡೂ ಕಡೆಗೂ ಹೆಚ್ಚು ನಿಗಾ ವಹಿಸುವುದು ಮುಖ್ಯವಾದುದು. ಹಾಗೆಯೇ ಕೆಲವೊಂದು ರೋಗಗಳಿಗೂ ಆಹಾರಕ್ಕೂ ಇರುವ ಸಂಬಂಧ ಇವೆಲ್ಲವನ್ನು ಸರಳವಾಗಿ ಲಕ್ಷಣವಾಗಿ ಅನುಪಮಾ ಅವರ "ಆಹಾರದಿಮದ ಆರೋಗ್ಯ" ಎಂಬ ಪುಸ್ತಕದಲ್ಲಿ ತಿಳಿಸಿದ್ದಾರೆ. ಇದು ವರ್ಷದ ಶ್ರೇಷ್ಠ ಕೃತಿಯಾಗಿ ರಾಜ್ಯ ಸಾಹಿತ್ಯ ಅಕಾಡೆಮಿಯ ಬಹುಮಾನ ಪಡೆದಿದೆ.

ಮತ್ತೊಂದು ಉತ್ತಮವಾದ, ಪುಸ್ತಕವೆಂದರೆ 'ಶಿಶುವೈದ್ಯ ದೀಪಿಕೆ' ಇದರಲ್ಲಿ ಮಕ್ಕಳ ಆರೋಗ್ಯ ಪಾಲನೆ, ಇದರಲ್ಲಿ ಮಗುವಿಗೆ ಸಮ ಪ್ರಮಾಣದಲ್ಲಿ ಅಹಾರವನ್ನು ಹೇಗೆ ನಿಡಬೇಕು, ಪದೇ ಪದೇ ಮಗುವಿಗೆ ಹಠಮಾಡುವುದನ್ನು ನಿಲ್ಲಿಸಲಿ ಎಂದು ಗುಮ್ಮ ಬರುತ್ತಾನೆ ಎಂದು ಹೆದರಿಸಬಾರದು, ಆ ಮಗುವಿಗೆ ಧೈರ್ಯವನ್ನು ತುಂಬುವುದು ಹೇಗೆ? ಸರಿಯಾದ ಸಮಯಕ್ಕೆ ಸರಿಯಾದ ಆಹಾರ ನೀಡುವುದು ಹೇಗೆ? ಎಂಬುದನ್ನು ವಿವರಿಸಿದ್ದಾರೆ. ಹಾಗೆಯೇ ಮಗುವಿಗೆ ಸಣ್ಣ ಆಟದಲ್ಲಿ ಗೆದ್ದಾಗ, ಅಥವಾ ಸೊತಾಗ ಅದಕ್ಕೆ ಉಡುಗೊರೆಗಳನ್ನು ಕೊಡಿಸುವುದು ಸರಿಯಲ್ಲ, ಯಾಕೆಂದರೆ ಮಗೂ ಹಠಮಾಡಿ ಅಳುವುದು ಹಾಗೂ ಶಾಲೆಯಲ್ಲಿ ಪಾಠಪ್ರವಚನದಲ್ಲಿ ಹಿಂದೆ ಬಿದ್ದಿದ್ದರೂ ಮನೆಗೆ ಅಪ್ಪ ಅಮ್ಮ ಉಡುಗೊರೆ ಕೊಡಿಸುತ್ತಾರೆಂದು ಅದೇ ದಾರಿ ಸರಿ ಎಂದು ಮಗು ಅಡ್ಡದಾರಿ ಹಿಡಿಯೋದು ತಪ್ಪು ಎಂಬುದನ್ನು ಶಿಶು ದೀಪಿಕೆಯಲ್ಲಿ ಅನುಪಮಾ ಅವರು ವಿವರಿಸಿದ್ದಾರೆ.

ಮಗುವಿನಲ್ಲಿ ವಿಚಿತ್ರ ನಡವಳಿಕೆಗಳು ಕಂಡುಬರುತ್ತವೆ, ಅದು ಯಾವುದು ಎಂದರೆ ಸಾಮಾನ್ಯವಾದ ಖಾಯಿಲೆ ಎಂದರೂ ತಪ್ಪಲ್ಲ, ಬೆರಳುಗಳನ್ನು ಚೀಪುವುದು, ಉಗುರುಕಚ್ಚುವುದು, ನಿದ್ದೆ ಮಾಡದೆ ಅಳುವುದು ಹೀಗೆ ಮಾಡುತ್ತವೆ. ಅದೇ ರೀತಿ ಮಗುವಿಗೆ ರಕ್ತಹೀನತೆ ಉಂಟಾಗಲು ಊಟ, ತಿಂಡಿ ಕೊಡುವಾಗ ಅನುಸರಿಸುವ ಕ್ರಮಗಳಿಂದ ಉಂಟಾಗುವ ಏರುಪೇರು, ಹಾಗೆಯೇ ಮಗುವಿಗೆ ಖಾಯಿಲೆ ಬಂದರೆ ಅಂಜಬೇಕೆ ಅಥವಾ ಬೇಗ ಆಸ್ಪತ್ರೆಗೆ ಹೋಗಿ ಅದಕ್ಕೆ ಸೂಕ್ತ ಚಿಕಿತ್ಸೆ ಕೊಡಿಸುವುದು ಹೇಗೆ ಎಂಬುದನ್ನು ಈ ಪುಸ್ತಕದಲ್ಲಿ ವಿವರಿಸಿದ್ದಾರೆ. ಮಗುವಿಗೆ ಕರುಳಿನ ಕಾಯಿಲೆಗಳು ರಕ್ತಬೇದಿ ಇನ್ನೂ ವಾಸಿಯಾಗಲಿಲ್ಲ ಇದು ಪಿತ್ತಕೋಶದ ಸೋಂಕೆ ಅಥವಾ ಮಾರಮ್ಮನಲ್ಲ– ವಿಬ್ರಿಯೋ–ಸಾವಿನಿಂದ ಬದುಕಿಗೆ ಬರುವಂತೆ ಅನುಸರಿಸಬೇಕಾದ ಕ್ರಮಗಳು ಹೇಗೆ? ಬುದ್ಧಿಮಾಂದ್ಯದ ಮಕ್ಕಳು ಹುಟ್ಟಲು

ಕಾರಣವೇನು? 'ಡಿ' ವಿಟಮಿನ್' ಕೊರತೆಯಿಂದ ಉಂಟಾಗುವ ರಿಕೆಟ್ಸ್ ಕಾಯಿಲೆಗೆ ನಮ್ಮಲ್ಲಿ 'ಹಕ್ಕಿರೋಗ' ಎನ್ನುವುದು ಇದು ಒಂದು ವರ್ಷದೊಳಗಿನ ಮಕ್ಕಳಲ್ಲೇ ಜಾಸ್ತಿ "ಮಗು ಯಾವಾಗ್ಲೂ ಅಳುತ್ತಿರುತ್ತಾನೆ ಡಾಕ್ಟರ್, ಸರಿಯಾಗಿ ನಿದ್ರೆ ಮಾಡೋದಿಲ್ಲ ಇದಕ್ಕೆ ಕಾರಣ ಎಂದು ಪೋಷಕರು ವೈದ್ಯರ ಬಳಿಗೆ ಹೋಗುವುದು ಇದಕ್ಕೆಲ್ಲಾ ಕಾರಣ ತಂದೆ–ತಾಯಿಗಳು ಕ್ರಮಬದ್ಧವಾಗಿ, ನಿಯಮಿತವಾಗಿ ಆಹಾರವನ್ನು ಮತ್ತು ಅದರ ಪೋಷಣೆಯನ್ನು ಸರಿಯಾಗಿ ಮಾಡಿದರೆ ಮಗುವಿನ ಬೆಳವಣಿಗೆಯೂ ಯಾವುದೇ ಕಾರಣಕ್ಕೂ ಕುಂಠಿತಗೊಳ್ಳುವುದಿಲ್ಲ ಎಂಬುದನ್ನು ತಿಳಿಯಲು ಅನುಪಮ ಅವರು ತಮ್ಮ ಶಿಶುವೈದ್ಯ ದೀಪಿಕೆಯಲ್ಲಿ ಪ್ರತಿಯೊಂದನ್ನು ವಿಸ್ತಾರವಾಗಿ ಚರ್ಚಿಸಿದ್ದಾರೆ, ಇದನ್ನೆಲ್ಲಾ ಇಂದಿನ ಪೋಷಕರು ಸರಿಯಾಗಿ ಅರ್ಥಮಾಡಿಕೊಂಡು ಮಗುವಿನ ಹಾರೈಕೆಯಲ್ಲಿ ಮುಂಜಾಗ್ರತಾ ಕ್ರಮಗಳನ್ನು ಅನುಸರಿಸಲು ಸೂಕ್ತವಾದ ಮಾರ್ಗದರ್ಶನವಾಗಿದೆ. ಅನುಪಮಾರವರ ಇನ್ನೊಂದು ಪ್ರಮುಖವಾದ ಪುಸ್ತಕವೆಂದರೆ 'ಕ್ಯಾನ್ಸರ್ ಜಗತ್ತು' ಇದಲ್ಲಿ ಕ್ಯಾನ್ಸರ್ ಹೇಗೆ ಬರುತ್ತದೆ, ಅದನ್ನು ನಿಯಂತ್ರಿಸುವುದು ಹೇಗೆ ಎಂಬುದು ಇದೆ. ಅಂದರೆ ಈ ಕಾಯಿಲೆಯ ಬಗ್ಗೆ ಬರೆಯುವುದಕ್ಕೆ ಸ್ವತಃ ಅನುಪಮಾರವರೇ ಕ್ಯಾನ್ಸರ್ ರೋಗಕ್ಕೆ ಬಲಿಯಾಗಿದ್ದರು, ಅದರಿಂದ ಅವರು ಪಡೆದ ಚಿಕಿತ್ಸೆ ಅದರಿಂದಾಗಿ ಸಾಕಷ್ಟು ನೋವನ್ನು ಅವರು ಅನುಭವಿಸಿದರು. ಹೆಚ್ಚಿನ ಚಿಕಿತ್ಸೆಗಾಗಿ ಮುಂಬೈವರೆವಿಗೂ ಹೋಗಿ ಸೂಕ್ತವಾಗಿ ಚಿಕಿತ್ಸೆಯನ್ನು ಪಡೆದು ಗುಣಮುಖರಾದರು, ಹಾಗೆಯೇ ಈ ಕ್ಯಾನ್ಸರನ್ನು ಹೇಗೆ ನಿಯಂತ್ರಿಸುವುದು ಯಾವ ರೀತಿ ಕ್ರಮಗಳನ್ನು ಪಡೆಯಬೇಕು ಈ ಕಾಯಿಲೆಯ ಬಗ್ಗೆ ಜನರಲ್ಲಿ ಇರುವ ಮೂಢನಂಬಿಕೆಗಳು ಹೇಗೇಗೆ ಇವೆ, ಕ್ಯಾನ್ಸರ್ ರೋಗಿ ಎಂದು ತಿಳಿದಾಕ್ಷಣ ರೋಗಿಯಿಂದ ಜನರು ದೂರವಾಗುತ್ತಾರೆ, ಅಂದರೆ ಆತನ ಪಕ್ಕ ಕೂರುವುದು, ನಿಲ್ಲುವುದು, ಮಾಡಿದರೆ ಅದು ಅಂಟುರೋಗ ಎಂದು ತಿಳಿದಿದ್ದ ಕಾಲ ಯಾವುದು, ನಾಗರೀಕತೆ ಮುಂದುವರಿದ ಮೇಲೆ ಶಸ್ತ್ರಕ್ರಿಯೆಗಳು ಯಂತ್ರೋಪಕರಣಗಳು ಬಂದ ಮೇಲೆ ಸಾಯುತ್ತಿದ್ದ ಕ್ಯಾನ್ಸ್‌ರ್ ರೋಗಿಯನ್ನು ಬದುಕಿಸುವುದು ಹೇಗೆ ಎಂಬ ವಿದ್ಯಮಾನಗಳನ್ನು ತಿಳಿದ ಜನರು ಈಚೆಗೆ ಭಿತಿಯನ್ನು ಬಿಟ್ಟು ಹೊರಬಂದಿದ್ದಾರೆ, ಈ ಚಿಕಿತ್ಸೆಯನ್ನು ಪಡೆಯುವಾಗ ತುಂಬಾ ನೋವನ್ನು ಅನುಭವಿಸಬೇಕಾಗುತ್ತದೆ ಎಂದು ತಿಳಿದಿರುವ ಜನರು ಅಂದರೆ ಚಿಕಿತ್ಸೆ ನಿಡುವಾಗ ವಾಕರಿಕೆ, ಸುಸ್ತು, ಏನೋ ಒಂದು ರೀತಿಯ ಯಾತನೆಯುಂಟಾಗುವುದು ಸಹಜ ಯಾಕೆಂದರೆ ದೇಹದಲ್ಲಿ ಚಿಕಿತ್ಸೆಯನ್ನು ನೀಡುವಾಗ ಹಾರ್ಮೋನುಗಳ ಏರುಪೇರುಗಳು ಪ್ರತಿಕ್ರಿಯಿಸುವಾಗ ತಲೆಸುತ್ತುವುದು, ಇದೆಲ್ಲಾ ಆಗುತ್ತದೆ ಹಾಗಾಗಿ ಯಾವುದಕ್ಕೂ

ಹೆದರದೆ ಧೈರ್ಯವಾಗಿ ಚಿಕಿತ್ಸೆ ಪಡೆಯಲು ರೋಗಿಗೆ ಧೈರ್ಯವನ್ನು ತಂದುಕೊಡಬೇಕು, ಈ ಕ್ಯಾನ್ಸರ್ ಕಾಯಿಲೆಯು ಹಿಂದೆ ಚಿಕಿತ್ಸೆಯಿಲ್ಲದೆ ಸಾಕಷ್ಟು ಜನರು ಸಾವನ್ನಪ್ಪುತ್ತಿದ್ದರು, ಆದರೆ ಈಗ ಈ ಸಮಸ್ಯೆಗಳು ದೂರವಾಗಿ ರೋಗಿಗಳಲ್ಲಿ ಹೊಸ ಆಸೆಗಳು ಬಂದು ಜನರ ಮರಣವನ್ನು ನಿಯಂತ್ರಿಸಿದೆ. ಈ ರೋಗವನ್ನು ನಿಯಂತ್ರಿಸಲು ಕೆಲವು ಕ್ರಮಗಳನ್ನು ಅನುಸರಿಸಬೇಕು ಎಂದು ಅನುಪಮರವರು ತಮ್ಮ 'ಕ್ಯಾನ್ಸರ್ ಜಗತ್ತಿನಲ್ಲಿ ತಿಳಿಸಿದ್ದಾರೆ. ನಮ್ಮ "ದೇಹದ ಎಲ್ಲಾ ಮೇಲ್ಪದರದ ಅಂಗಾಂಶಗಳ ಬೆಳವಣಿಗೆಗೆ ವಿಟಮಿನ್ 'ಎ' ಸಹಕಾರಿ. ಇದು ಕ್ಯಾನ್ಸರ್ ಉಗಮ ಮತ್ತು ಅದರ ವೃದ್ಧಿಯನ್ನು ನಿಯಂತ್ರಿಸುವ ಶಕ್ತಿ ಇರುತ್ತದೆ, ಸಂತೋಷಕ್ಕಾಗಿ ಕೆಲವು ಪಾನೀಯಗಳನ್ನು ಸೇವಿಸುವುದು, ಮದ್ಯ, ಸಿಗರೇಟು, ಹೊಗೆಸೊಪ್ಪು ಇವು ಶರೀರಕ್ಕೆ ಅತಿ ಹೆಚ್ಚಿನ ತೊಂದರೆಯನ್ನುಂಟುಮಾಡುತ್ತದೆ. ಇದರಿಂದ ದೇಹದಲ್ಲಿನ ಪ್ರತಿರೋಧಕ ಶಕ್ತಿಯನ್ನು ಕುಗ್ಗಿಸುತ್ತದೆ. ಇವುಗಳ ಸೇವೆನೆಯಿಂದ ಪೌಷ್ಟಿಕ ಅಂಶಗಳ ಕೊರತೆಯುಂಟಾಗಲು ಇದು ಸಹಾಯ ಮಾಡುತ್ತವೆ. ಆದುದರಿಂದ ಕ್ಯಾನ್ಸರ್‌ನ್ನು ನಿಯಂತ್ರಿಸಲು ಕೆಲವು ಕ್ರಮಗಳನ್ನು ಅನುಸರಿಸುವುದು ಒಳ್ಳೆಯದು ಅವುಗಳೆಂದರೆ ನಾರು ಹೆಚ್ಚಾಗಿ ಇರುವ ಆಹಾರ ಸೇವಿಸುವುದು, ಕೊಬ್ಬಿನ ಪದಾರ್ಥಗಳನ್ನು ಮಿತಗೊಳಿಸುವುದು, ವಿಟಮಿನ್ ಎ, ಬಿ. ಸಿ, ಡಿ ಇರುವ ಆಹಾರಗಳನ್ನು ಹೆಚ್ಚಾಗಿಸುವುದು, ಹೆಚ್ಚಾಗಿ ಮಾಂಸಗಳ ಅಧಿಕ ಸೇವನೆಯನ್ನು ಕಡಿಮೆ ಮಾಡುವುದು, ಕೃತಕವಾದ ತಂಪುಪಾನಿಯಗಳನ್ನು ನಿಯಂತ್ರಿಸುವುದು ಇನ್ನು ಮುಂತಾದವುಗಳು. ಮತ್ತೊಂದು ಉತ್ತಮವಾದ, ಸುಂದರವಾದ ಮಧುಮಗಳು ಹಾಗೂ ಮದುವೆಯ ಮುನ್ನ ಅವಳು ಅನುಸರಿಸಬೇಕಾದ ನಿಯಮಗಳ ಬಗ್ಗೆ ಹಾಗೂ ವಿವಾಹವಾದ ಮೇಲೆ ತನ್ನ ಗಂಡನ ಜೊತೆ, ಅತ್ತೆ, ಮಾವ, ಮೈದುನ, ನಾದಿನಿಯರ ಜೊತೆ ಹೇಗಿರಬೇಕು ಎಂಬುದನ್ನೆಲ್ಲಾ ಅರಿಯಲು ಸುಂದರವಾದ ಪುಸ್ತಕವನ್ನು 'ವಧುವಿಗೆ ಕಿವಿ ಮಾತು', ಇದನ್ನು ಅನುಪಮಾರವರು ಬರೆದ ಪುಸ್ತಕವಾಗಿದೆ. ಮದುವೆಯಾಗುವುದಕ್ಕಿಂತ ಮುಂಚೆ ಗಂಡು ನಿಶ್ಚಯವಾದಾಗ ಅಪರಿಚಿತನಾಗಿದ್ದ ಯುವಕ ನನ್ನನ್ನು ವಿವಾಹ ವಾಗುತ್ತಾನೆ ಎಂದು ತಿಳಿದಾಗ ನಾವು ಕಾಣುವ ಕನಸು, ಕಲ್ಪನೆ ಹೇಳತೀರದು, ಆತ ಅತ್ಯಂತ ಬಡವನಾದರೂ ನಮ್ಮ ಮಟ್ಟಿಗೆ ಆತ ರಾಜಕುಮಾರನೇ, ಮದುವೆ ಯಾದ ಮೇಲೆ ಆತನೊಂದಿಗೆ ಕಳೆಯುವ ಸಮಯವಿದೆಯಲ್ಲಾ ಅದು ರಸನಿಮಿಷಗಳೇ ಹಾಗಿರುತ್ತದೆ. ಮದುವೆಯೆಂದರೆ ಹೆಣ್ಣು ಗಂಡಿನ ಪರಸ್ಪರ ಮಿಲನವೇ ಪ್ರಮುಖ ವಾದದು ಎಂದು ತಿಳಿಯದೇ ಇಬ್ಬರೂ ಪರಸ್ಪರ ತಿಳುವಳಿಕೆ , ಗೌರವ, ಹೊಂದಿಕೆಗಳು

ಇರಬೇಕಾಗುತ್ತದೆ, ಆದರೆ ಮದುವೆಯಾದ ಮೆಲೆ ತನ್ನ ಸ್ನೇಹಿತೆ ನಾನು ಒಂದೇ ಕ್ಲಾಸ್‌ಮೆಟ್ ಆದರೆ ಆಕೆಗೆ ಡಾಕ್ಟರ್ ವರ, ನನಗೆ ಗುಮಾಸ್ತ ಛೇ ಎಂಥಹ ವಿಪರ್ಯಾಸ ಎಂದು ಜುಗುಪ್ಸೆಗೆ ಹೋಗುವುದು ಸರಿಯಲ್ಲ, ಯಾಕೆಂದರೆ ನಮ್ಮ ಯೋಗ್ಯತೆಗೆ ಕುಟುಂಬಕ್ಕೆ ಅನುಸಾರವಾಗಿ ವರಸಿಗುವ ಸಾಧ್ಯತೆಗಳೂ ಇರುತ್ತದೆ, ಆದುದರಿಂದ ಗಂಡನೊಂದಿಗೆ, ಮನೆ ಮಂದಿಯೊಂದಿಗೆ ನಾವು ಅನುಸರಿಸಿಕೊಂಡು ಹೋಗುವುದು ಒಳಿತು, ಒಂದು ಮನೆಯನ್ನು ವದುವಾದವಳು ಬುದ್ಧಿವಂತಿಕೆಯಿಂದ ನಿಭಾಯಿಸುವುದು, ಒಂದು ಆಫೀಸನ್ನು ನಡೆಸುವುದಕ್ಕಿಂತಲೂ ಕಷ್ಟವಾದ ಕೆಲಸವಾಗಿರುತ್ತದೆ. ಆದುದರಿಂದ ಹಿರಿಯರಿಂದ, ತಂದೆ, ತಾಯಿಗಳಿಂದ ಅನುಭವದ ಮಾತುಗಳನ್ನು ಕೇಳಿ ಸಂಯಮದಿಂದ ಮನೆಯವರೊಂದಿಗೆ ವರ್ತಿಸಬೇಕು ಅದರಲ್ಲೂ ಅತ್ತೆಯೇ ಮನೆಯ ಯಜಮಾನಿಯಾಗಿರುತ್ತಾರೆ, ಅವರ ಮನಸ್ಸನ್ನು ಗೆದ್ದರೆ, ಅರ್ಧ ಕೆಲಸ ಮುಗಿದಂತೆ.



ಮದುವೆಯಾದ ಹೆಣ್ಣಿಗೆ ಸಾಕಷ್ಟು ಲೈಂಗಿಕ ತಿಳಿವಳಿಕೆಯನ್ನು ತಾಯಿಯಾದವಳು, ಸ್ನೇಯಿತೆಯರಿಂದ ಅಥವಾ ಅವರಿಗೆ ಹೇಳಲು ಮುಜುಗರವಾದರೆ ಕುಟುಂಬದ ವೈದ್ಯರಿಂದ ಈ ವಿಷಯದ ಬಗ್ಗೆ ಸಂಕೋಚಪಟ್ಟುಕೊಳ್ಳದೇ ಕೇಳಿ ತಿಳಿದುಕೊಳ್ಳುವುದು ಉತ್ತಮ, ಯಾಕೆಂದರೆ ಸ್ತ್ರೀ ಮತ್ತು ಪುರುಷರ ಜನನೇಂದ್ರಿಯಗಳ ರಚನಾ ವಿಧಾನ ಅವು ಮಾಡುವ ಹೊರಗಿನ ಉದ್ರೇಕಗಳಿಗೆ ಅಥವಾ ಪ್ರಚೋದನೆಗಳಿಗೆ ಇವು ಪ್ರತಿಕ್ರಿಯೆ ತೋರಿಸುವ ರೀತಿ ಇವನ್ನೆಲ್ಲಾ ತಿಳಿದುಕೊಂಡರೆ ಮದುವೆಯ ಬಗೆಗೆ ಇರುವ ತಪ್ಪು ಕಲ್ಪನೆಗಳ ಭೀತಿ ಹೋಗುತ್ತದೆ. ಈ ರೀತಿಯಲ್ಲಿ ದೈಹಿಕವಾಗಿ, ಮಾನಸಿಕವಾಗಿ, ಮದುವೆಗೆ ಸಿದ್ಧವಾದ ವಧು ಯೋಗ್ಯಳಾದ ಮದುವಣಗಿತ್ತಿಯಾಗುವುದಲ್ಲದೆ ಹುಟ್ಟಿದ ಮನೆಗೂ, ಮೆಟ್ಟಿದ ಮನೆಗೂ ಕೀರ್ತಿ ತರುತ್ತಾಳೆ.

"ವಧುವಿಗೆ ಕಿವಿಮಾತು" ಪುಸ್ತಕದಲ್ಲಿ "ನೂತನ ವಧು'ವಿಗೆ ಯಾವ ರೀತಿಯಿರಬೇಕು ಹೊಸ ವಧು ಮದುವೆಯಾದ ಮೇಲೆ ಅವಳು ಅನುಸರಿಸುವ ಮಾರ್ಗಗಳು ಹೇಗಿರಬೇಕು ಎಂಬುದರ ಬಗ್ಗೆ ಅನುಪಮಾರವರು ತಮ್ಮ ಬರಹದಲ್ಲಿ ತಿಳಿಸಿದ್ದಾರೆ, ಮದುವೆಯಾದ ಮೇಲೆ ಅವಳಲ್ಲಿ ಭಾವನೆಗಳು ಆಕರ್ಷಣೆಗಳು ಜಾಸ್ತಿಯಿರುತ್ತದೆ. ನನ್ನ ಗಂಡ ನನ್ನ ಕಣ್ಣಲ್ಲಿ ಕಣ್ಣಿಟ್ಟು ನೋಡಬಾರದೇ? ಸಿಹಿಯಾದ ಮಾತುಗಳನ್ನು ಆಡಬಾರದೆ, ಇದು ಹೆಣ್ಣು ಮಗಳಿಗೆ ಅನುಭವಿಸುವಂಥದ್ದೇ, ಇದರಿಂದಾಗಿ ಅಪರಿಚಿತರಾಗಿದ್ದ ಹೆಣ್ಣುಗಂಡುಗಳು ಆತ್ಮೀಯರಾಗುತ್ತಾರೆ.

ಮದುವೆಯಾದ ಹೆಣ್ಣು ತಂದೆ-ತಾಯಿಯನ್ನು ಬಿಟ್ಟು ಗಂಡನ ಮನೆಗೆ ಹೋಗುವುದು ಅತ್ಯಂತ ಕಷ್ಟವೇ, ಆದರೆ ಗಂಡನ ಮುಖವನ್ನು ನೋಡಿದ ಮೇಲೆ ಆಕೆಯ ಗಮನವೆಲ್ಲಾ ಅವನ ಮೇಲಿರುತ್ತದೆ ಆದುದರಿಂದ ಅವಳು ಗಂಡನ ಮನೆಯಲ್ಲಿ ಹೊಂದಿಕೊಂಡು ಹೋಗಲು ಅನುಕೂಲವಾಗುತ್ತದೆ. ಪತಿಯ ಬಗೆಗೆ ಇಷ್ಟೊಂದು ಅನುರಾಗ, ಆತ್ಮೀಯತೆ ಕಂಡು ಆಶ್ಚರ್ಯವು ಆಗುತ್ತದೆ. ಈ ಸಮಯದಲ್ಲಿ ಗಂಡ, ಹೆಂಡತಿ ಇಬ್ಬರ ಉದ್ದೇಶವೂ ಒಂದೇ ರೀತಿಯಾಗಿರುತ್ತದೆ. ಯಾಕೆಂದರೆ ಇವರಿಬ್ಬರಿಗೂ ಆಕರ್ಷಣೆ ಜಾಸ್ತಿ ಆದುದರಿಮದ ಹೆಚ್ಚು ಕಾಲ ಏಕಾಂತವನ್ನು ಬಯಸುತ್ತಾರೆ, ತಮ್ಮಿಬ್ಬರನ್ನು ಬಿಟ್ಟು ಬೇರೆಯ ಜಗತ್ತೆ ಇಲ್ಲ ಎಂಬ ಕುರುಡು ಸಿದ್ಧಾಂತಕ್ಕೆ ಅವರು ಬರುತ್ತಾರೆ, ಮದುವೆಯಾದ ಹೊಸತರಲ್ಲಿ ಗಂಡಹೆಂಡತಿಗೆ ದೈಹಿಕ ಆಕರ್ಷಣೆ ಜಾಸ್ತಿಯಾಗಿರುತ್ತದೆ. ಇದೆಲ್ಲಾ ಪ್ರಕೃತಿಯ ನಿಯಮವೆಂದೇ ಹೇಳಬೇಕು, ಗಂಡನಾದವನು ಹೆಂಡತಿಯಿಂದ ಏನನ್ನು ಆಸೆ ಪಡುತ್ತಾನೆ ಎಂಬುದನ್ನು ಮೊದಲೇ ಪತ್ನಿಯಾದವಳು ತಿಳಿದುಕೊಳ್ಳಬೇಕು, ಆತ ಲೈಂಗಿಕ ವಿಷಯದಲ್ಲಿ ಆತ ಹೆಚ್ಚು ಬಯಸುವವನಾಗಿರುತ್ತಾರೆ, ಇದರ ಬಗ್ಗೆ ತಿಳಿದುಕೊಂಡು ಹೆಂಡತಿ ಸಹಕರಿಸಿದಾಗ ದಾಂಪತ್ಯ ಲೈಂಗಿಕತೆ ಉತ್ತಮವಾಗಿರುತ್ತದೆ, ಆದರೆ ಲಯಂಗಿಕತೆಯಲ್ಲಿ ಸರಿಯಾಗಿ ತಿಳುವಳಿಕೆಯಿಲ್ಲದೆ ಅರೆಬರೆ ತಿಳಿದು ಗಂಡ ನನ್ನ ದೇಹಮಾತ್ರ ಬಯಸುತ್ತಾನೆ ಎಂದು ಅಜ್ಞಾನದಿಂದ ವರ್ತಿಸಿದಾಗ ಸುಂದರವಾಗಬೇಕಾಗಿದ್ದ ಬಾಳು ಗೊಂದಲಮಯವಾಗುತ್ತದೆ, ಆದುದರಿಮದ ಪ್ರತಿಯೊಂದು ಹೆಣ್ಣು ಈ ವಿಷಯದಲ್ಲಿ ಸಂಪೂರ್ಣ ತಿಳುವಳಿಕೆ ಅಗತ್ಯವೆಂದು ಅನುಪಮಾ ಅವರು ಬರೆದಿದ್ದಾರೆ.

"ಹೊಸ ಮನೆಯ ಬೆಳಕು" ಎಂಬ ಕಿವಿಮಾತಿನಲ್ಲಿ ಸೊಸೆಯಾಗಿ ಬಲಗಾಲು ಮುಂದೆ ಇಟ್ಟು ಬಂದ ಮೇಲೆ ಆ ಮನೆಯ ಒಳಿತು, ಕೆಡಕು ಎಲ್ಲವನ್ನು ಸಹಿಸಿ ಮನೆಯವರೆಲ್ಲರಿಗೂ ತೃಪ್ತಿ ಆಗುವ ರೀತಿಯಲ್ಲಿ, ಸೊಸೆಯಾದವಳು ನಡೆದುಕೊಳ್ಳುವುದು ಅವಶ್ಯಕ, ಸೊಸೆಯಾದ ಮೇಲೆ ಎಲ್ಲಕ್ಕಿಂತ ಹೆಚ್ಚಾಗಿ ಅತ್ತೆಗೆ ತಕ್ಕ ಸೊಸೆಯಾಗಿ ನಡೆದುಕೊಳ್ಳುವುದನ್ನು ಮೊದಲು ಕಲಿಯಬೇಕು, ಆಕೆಯ ಬೇಕು, ಬೇಡಗಳನ್ನು ಸರಿಯಾಗಿ ಗಮನಿಸಿದಾಗ ಸಂಸಾರದ ನೌಕೆ ಸುಲಲಿತವಾಗಿ ಸಾಗುವುದು ಸಾಧ್ಯ, ಯಾಕೆಂದರೆ ಅತ್ತೆಯವರು ಕೆಲವೊಂದು ಕುಟುಂಬದಲ್ಲಿ ಸಿಡುಕು ದುಡುಕು ಬುದ್ಧಿಯವರು ಇರುತ್ತಾರೆ, ಯಾವಾಗಲಾದರೂ ನಮ್ಮನ್ನು ಈ ಕೆಲಸ ಸರಿಯಿಲ್ಲ, ಇದೆನಾ ಕಲಿತಿರೋದು ಎಂದು ಹಂಗಿಸಿದಾಗ ಪಲ್ಯ ಸೀದು ಹೋಗಿದ್ಯೆಲ್ಲೇ? ಒಲೆ ಮುಂದೆ ಕೂತುಕೊಂಡು ನಿನ್ನ ತಂದೆ ತಾಯಿಯ ಮನೆ ಕನಸು ಕಾಣುತ್ತಿದ್ದೀಯಾ

ಎಂದು ಹೀಯ್ಯಾಳಿಸಿದಾಗ ಅದೆಲ್ಲವನ್ನು ಗಂಡನ ಮುಂದೆ ಹೇಳಬಾರದು, ಯಾಕೆಂದರೆ ಗಂಡ ಅವರ ತಾಯಿಯನ್ನು ಯಾಕಮ್ಮ ಅವಳನ್ನು ಬಯ್ದೆಯಂತೆ? ಎಂದು ಕೇಳಿದಾಗ ತಾಯಿಯು ರುದ್ರಾವತಾರವನ್ನು ತಾಳುತ್ತಾರೆ, ಆದುದರಿಂದ ಅತ್ತೆಗೆ ವಿರುದ್ಧವಾಗಿ ಯಾವುದನ್ನು ಮಾಡದೆ ನಯನಾಜೂಕಿನಿಂದ ಸಂಸಾರದಲ್ಲಿ ಇರಬೇಕಾಗುತ್ತದೆ. ಅಂದರೆ ಸೊಸೆಯು 'ಚತುರಮತಿ'ಯಾಗಿ ಅತ್ತೆಯ ಮನಸ್ಸನ್ನು ಗೆಲ್ಲಬೇಕು, ಹೇಗೆಂದರೆ ಮನೆಯಲ್ಲಿ ಕಾಫಿ ತಯಾರು ಮಾಡಿ ಅತ್ತೆಯ ಕೈಯಲ್ಲಿಟ್ಟು ಅತ್ತೆ ನೀವು ಮಾವನಿಗೆ ಕೊಡುತ್ತಿರೋ ಅಥವಾ ನಾನೆ ಕೊಟ್ಟುಬರಲೇ ಎಂದು ಕೇಳಿದಾಗ ಅತ್ತೆಯ ಮನಸ್ಸಲ್ಲಿ ಒಳ್ಳೆಯ ಅಭಿಪ್ರಾಯ ಬರುವುದಕ್ಕೆ ಕಾರಣಳಾಗಬಹುದು, ಅತ್ತೆಯವರಿಗೆ ವಯಸ್ಸಾದರೇನಂತೆ ಅವರಿಗೂ ಗಂಡನ ಸೇವೆಯನ್ನು ಮಾಡುವ ಆಸಕ್ತಿಯಿರುತ್ತದೆ, ಆದುದರಿಂದ ಅವರ ಹಕ್ಕನ್ನು ಕಿತ್ತುಕೊಳ್ಳಬಾರದು. "ಪ್ರೀತಿಯ ಬದುಕು" ಗಂಡನ ಮನೆಗೆ ಬಂದ ಮೇಲೆ ಮೊದಲ ಆದ್ಯತೆಯನ್ನೆಲ್ಲಾ ಗಂಡನ ಕಡೆ ಕೊಡಬೇಕು, ಆತನ ಬೇಕು, ಬೇಡಗಳನ್ನು, ಮಾನಸಿಕ ನೆಮ್ಮದಿಯನ್ನು ಮೊದಲು ಅರಿಯಬೇಕು, ಹೆಣ್ಣು ಮದುವೆಯಾಗಿ ಬಂದಮೇಲೆ ಮನೆ ಒಡೆಯುವುದಲ್ಲ, ಹಳೆಯ ಸಂಪ್ರದಾಯದ ಅತ್ತೆಯೊಡನೆ ಹೊಂದಿಕೊಂಡು ಹೋಗಲು ಯತ್ನಿಸಿ ಕಟ್ಟುವುದಕ್ಕೆ ಅವರ ನಂಬಿಕೆಗಳನ್ನು ಪ್ರೋತ್ಸಾಹಿಸಿ ಮನೆಯು ದೇವ ಮಂದಿರವಾಗುತ್ತದೆ, ಹೀಗೆ ಎಲ್ಲಾ ರೀತಿಗಳಿಂದಲೂ ಗಂಡನಿಗೆ ತಕ್ಕ ಸತಿಯಾಗಿ ಬಾಳಬೇಕು, ಕೆಟ್ಟ ವಾತಾವರಣವಿದ್ದರೆ ಅದನ್ನು ಬದಲಾಯಿಸುವುದಲ್ಲದೆ ಮನೆಯವರೆಲ್ಲರೂ ನೆರೆಹೊರೆಯವರೂ ನಮ್ಮನ್ನು ಗೌರವ ಆದರಗಳಿಂದ ಕಾಣುತ್ತಾರೆ.

ವೈವಾಹಿಕ ಜೀವನದಲ್ಲಿ ಪ್ರೀತಿ ತ್ಯಾಗಗಗಳಷ್ಟೇ ಪ್ರಮುಖವಾದುದು, ಸತಿಪತಿಗಳ ಲೈಂಗಿಕ ಜಿವನ, ಮಾನವ ಸಹಜವಾದ ಕ್ರಿಯೆ, ಇದು ಪ್ರಕೃತಿಯ ನಿಯಮವು ಹೌದು, ಆದರೆ ಮೊದಲು ವಿವಾಹವಾದ ಹೆಣ್ಣಿಗೆ ಲೈಂಗಿಕತೆಯ ಬಗ್ಗೆ ಏನೂ ತಿಳಿದಿರುವುದಿಲ್ಲ, ಆಕೆಗೆ ತಿಳಿಯುವಂತೆ ತಾಯಿಯಾದವಳು ಉಪದೇಶ ಮಾಡಬೇಕು, ಗಂಡು ಹೆಣ್ಣು ಒಬ್ಬರನ್ನೊಬ್ಬರು ಸ್ಪರ್ಷಿಸುವುದು ಸಹಜ ಅದು ಮದುವೆಯಾದವನಿಗೆ ಹೆಣ್ಣು ಸಹಕರಿಸಬೇಕು ಎಂದು ತಿಳಿಹೇಳಿದಾಗ ಆಕೆಯ ಮನಸ್ಸು ಮಿಡಿಯುತ್ತದೆ, ಅದನ್ನು ಬಿಟ್ಟು ಏನನ್ನು ಅರಿಯದ ಆಗತಾನೆ ವಿವಾಹವಾದ ಮಗಳಿಗೆ ತಾಯಿಯಾದವಳು ಮೊದಲರಾತ್ರಿ ಗಂಡನಬಳಿಗೆ ಹೋಗುವವಳಿಗೆ ಈ ರೀತಿ ಹೇಳಿದರೆ "ನೋಡು, ಹೆಂಗಸರ ಹಣೇ ಬರಹವೇ ಇಷ್ಟು, ನೀನು ಗಂಡನಿಗೆ ದಾಸಿ, ಆತ ನಿನ್ನನ್ನು ಹರಿದಾಡುತ್ತಾನೆ, ನಿಂಗೆ ರಕ್ತಸ್ರಾವವಾಗುತ್ತದೆ!" ಎಂದಾಗ ಮಗಳು ಹೆದರುವುದಲ್ಲದೆ

ರಾತ್ರಿಗಳೆಲ್ಲ ಕಾಳರಾತ್ರಿಯಾಗುತ್ತದೆ, ಆದುದರಿಂದ ವಧುವಾದವಳಿಗೆ ತಿಳಿವಳಿಕೆ ನೀಡುವುದು ಪ್ರಮುಖವಾದ ಕೆಲಸ, ಹಾಗೆಯೇ ಇಂದಿನ ಯುವತಿಯರು ಆಟ, ಪಂದ್ಯಾಟ, ಸೈಕಲ್ ಸವಾರಿ, ಈಜುವುದು, ಮುಂತಾದವುಗಳಲ್ಲಿ ತೊಡಗುವುದು ಸರ್ವೇಸಾಮಾನ್ಯವಾಗಿದೆ, ತೆಳ್ಳಗಿನ ಯೋನಿಯು ಪಲ್ಲಟಗೊಳ್ಳುವುದು, ಇದು ಮದುವೆಗೆ ಮುಚಿಯೇ ಒಡೆದಿರಬಹುದು, ಇದರಿಂದಾಗಿ ಇವರನ್ನೆಲ್ಲಾ ಕನ್ಯೆಯಲ್ಲ ಎಂದು ಹೇಳಲು ಸಾಧ್ಯವೇ ಈ ರಕ್ತಸ್ರಾವದ ವಿಷಯವಾಗಿ ಯೋಚಿಸುವುದು ಅನವಶ್ಯಕ ಎನಿಸುತ್ತದೆ, ಈ ರೀತಿಯ ಭಾವನೆಗಳು ದೂರವಾಗಬೇಕಾದರೆ ವೈಜ್ಞಾನಿಕ ತಳಹದಿಯ ಲೈಂಗಿಕ ಶಿಕ್ಷಣದಿಂದ ಮಾತ್ರಾ ಸಾಧ್ಯ, ಈ ರೀತಿಯ ತೊಂದರೆಗಳನ್ನೆಲ್ಲಾ ತಿಳಿದುಕೊಂಡು ಅವರು ತೋರುವ ನಿರುತ್ಸಾಹ, ಜುಗುಪ್ಸೆಗಳನ್ನು ದೂರಮಾಡುವುದಲ್ಲದೆ ಎಲ್ಲರಂತೆ ಸುಖವಾದ ಜೀವನ ನಡೆಸಲು ಸಾಧ್ಯ.

ಈಗಿನ ಕಾಲದಲ್ಲಿ ಹೆಚ್ಚು ಸ್ತ್ರೀಯರು ಮನೆ ಕೆಲಸವಲ್ಲದೆ ಹೊರಗೆ ದುಡಿಯಲು ಹವಣಿಸುವುದು ಸಹ ಅದನ್ನು ಆಧಾರವಾಗಿಟ್ಟುಕೊಂಡು ಅನುಪಮಾ ಅವರು ಉದ್ಯೋಗಂ ಸ್ತ್ರೀಲಕ್ಷಣಂ ಎಂಬುದರಲ್ಲಿ ಸ್ತ್ರೀ ಬಗ್ಗೆ ನಮಗೆ ತಿಳುವಳಿಯಾಗಲು ವಧುವಿಗೆ ಕಿವಿಮಾತು ಪುಸ್ತಕದಲ್ಲಿ ಬರೆದಿದ್ದಾರೆ. ಒಂದು ಹೆಣ್ಣು ನಾಲ್ಕು ಗೋಡೆಗಳ ಮಧ್ಯೆ ತನ್ನ ಬದುಕು, ಎಂದು ಈಚೆಗೆ ಚಿಂತಿಸದೇ ಅವಳ ಪ್ರಯತ್ನ, ಸಾಧನೆಯೂ ಮನೆಯಿಂದ ಹೊರಗೂ ಪಸರಿಸಿದೆ ಎಂದರೆ ತಪ್ಪಾಗಲಾರದು, ಮನೆಯಲ್ಲಿ ದುಡಿಯುವುದಲ್ಲದೆ ಆಫೀಸಿನಲ್ಲೂ ದುಡಿದು, ಗೃಹಿಣಿಯಾದವರಿಗೆ ಮನೆಯಲ್ಲಿರುವವರೆಗೂ ನೆರವಾಗುವುದಕ್ಕೆ ಸಮಯ ಮತ್ತು ಅವಕಾಶಗಳಿವೆ, ಆದರೆ ದುಡಿಯುವ ಹೆಣ್ಣಿನ ಪರಿಸ್ಥಿತಿ ಬೇರೆ ಇದೆ, ಅವಳಿಗೆ ಮನೆಯಲ್ಲಿ ಸ್ವಲ್ಪ ಸಹಾಯವಿದ್ದರೂ, ಸಾಕು ಮನೆಯ ಹಾಗೂ ಉದ್ಯೋಗ ಎರಡನ್ನೂ ಜಾಣ್ಮೆಯಿಮದ ನಿಭಾಯಿಸಿಕೊಂಡು ಹೋಗುವ ಕಲೆ ಗೊತ್ತಿರುತ್ತದೆ. "ಹೆಣ್ಣಿನ ಬಗ್ಗೆ ಬರೆದಂತೆ ಅನುಪಮಾ ಅವರು ತಾಯಿ-ಮಗು, ವಧುವಿನ ಸಂದರ್ಭಗಳಿಂದ ತಾಯ್ತನಕ್ಕೆ ಕಾಲಿಡುವ ಬಗ್ಗೆ ಜಾಗ್ರತೆಯನ್ನು ಮೂಡಿಸುತ್ತಾರೆ, ಇವರ ವೈದ್ಯ ಸಾಹಿತ್ಯದ ಇನ್ನೊಂದು ಭಾಗವೆಂದರೆ ತಾಯ್ತನ ಮತ್ತು ಶಿಶುವಿನ ಪೋಷಣೆ, ಈ ರೀತಿಯ ಪುಸ್ತಕಗಳು ಗ್ರಾಮೀಣ ಮಹಿಳೆಯರಿಗಾಗಿ ಬರೆದಿದ್ದಾರೆ".

ಹೆಣ್ಣು ಯೌವ್ವನಾವಸ್ಥೆಗೆ ಬಂದಮೇಲೆ ಆಕೆಗೆ ವಿವಾಹವು ಆಗುತ್ತದೆ. ಅದು ಆದ ಮೆಲೆ ಗಂಡ-ಹೆಂಡತಿಯ ರಸನಿಮಿಷಗಳು ಹೇಳತೀರದು. ಹೀಗೆ ಒಂದುವರುಷ ಕಳೆದ ಮೇಲೆ ಅಕ್ಕಪಕ್ಕದ ಮನೆಯಲ್ಲಿ ಮಗು ಅಳುವ, ಆಟವಾಡುವ, ಲಾಲಿಯಾಡುವ

ಮಾತುಗಳು ಕಿವಿಗೆ ಬಿದ್ದಾಗ ನಿಮಗನ್ನಿಸುತ್ತದೆ, ನಾನೂ ತಾಯಿಯಾಗಬೇಕು, ಅತ್ತೆ ಮಾವರಿಗೆ ಬೇಜಾರು ಕಳೆಯಲು, ಹಾಗೆಯೇ ನನ್ನ ಹೆಣ್ತನವನ್ನು ಈ ಪ್ರಪಂಚಕ್ಕೆ ತೋರಿಸಬೇಕು, ಗಂಡನಿಗೆ ತಕ್ಕ ಪತ್ನಿಯಾಗಿ ಇರುವುದಕ್ಕೆ, ಈ ಮನೆಯು ಕಂದನ ಧ್ವನಿ ಕೇಳಿ ಕಿವಿ, ಮನ ತನುಗಳೆಲ್ಲ ನಿಮಿರುವುದಕ್ಕೆ ಮನೆಗೊಮದು ಮಗುಬೇಕು ಎಂದು ಆಸೆ ಪಡುವುದು ಹೆಣ್ಣಿಗೆ ಸಹಜ.

ಗರ್ಭಕೋಶದ ಬಗೆಗೆ ತಿಳಿಯಬೇಕಾದುದು ಮುಖ್ಯ ಯಾಕೆಂದರೆ ನಾಳೆ ತಾಯಿಯಾಗುವುದಕ್ಕೆ ಅಗತ್ಯ "ಮಗು ಹೇಗೆ ರೂಪುಗೊಳ್ಳುತ್ತೆ ಎಂಬುದನ್ನು ತಿಳಿಯಲು ಮಗು ಸಣ್ಣ ಜೀವಾಣುವಿನಿಂದ ಉಗಮವಾಗಿ, ಕಡೆಗೆ ಮಾನವ ಶಿಶುವಾಗಿ ರೂಪಾಂತರ ಹೊಂದುವುದು ಆಶ್ಚರ್ಯಕರವಾಗಿಯೂ ಅಧ್ಬುತವಾಗಿಯೂ ನಿಮಗೆ ಕಾಣುತ್ತದೆ, ಅಲ್ಲವೇ? ಆದರೆ ಮಗುವಿನ ಬೆಳವಣಿಗೆಯ ವಿವಿಧ ಹಂತಗಳನ್ನು ಗಮನಿಸಿದಾಗ, ಅದು ಸರಳವೂ ಸಹಜವೂ ಅಹುದೆಂದು ನಿಮಗೆ ಅನಿಸದಿರದು."

ಒಂದು ಮಗು ಜನಿಸಬೇಕಾದರೆ ಅದು ಗಂಡು, ಹೆಣ್ಣಿನ ಸಮಾಗಮದಿಂದ ಹೆಣ್ಣಿನ ಅಂಡಾಣು ಮತ್ತು ಗಂಡಿನ ವೀರ್ಯಾಣುವಿನ ಕೂಡುವಿಕೆಯಿಂದ ಅದು ಬೆಳೆದು ಮಗುವಾಗಿ ಹೊರಬರುವುದೆಂದರೆ ಒಂಬತ್ತು ತಿಂಗಳು ತುಂಬಿದ ನಂತರ ಎಂದು ತಿಳಿದಾಗ ಆಶ್ಚರ್ಯವೆಂದು ಅನ್ನಿಸುವುದಿಲ್ಲವೇ? ಹಾಗೆಯೇ ಆ ಮಗು ಹೊಟ್ಟೆಯಲ್ಲಿ ಬೆಳೆಯಬೇಕಾದರೆ ಆ ತಾಯಿಯು ಎಷ್ಟು ಜಾಗ್ರತೆಯಿಂದ ಇರಬೇಕು, ಎಷ್ಟೆಲ್ಲಾ ನೋವನ್ನು ತಾಯಿ ಅನುಭವಿಸಿ ಅದು ತಿಂಗಳು ತುಂಬಿ ಹೊರಬಂದಾಗ ರಕ್ತದ ಮುದ್ದೆಯಂತಿರುವ ಮಗುವಿನ ಮುಖವನ್ನು ನೋಡಿದಾಗ ಆ ತಾಯಿಗೆ ತನ್ನ ನೋವೆಲ್ಲಾ ಮರೆತು ಮಗುವಿನ ಪೋಷಣೆಗೆ ನೆರವಾಗುತ್ತಾಳೆ.

"ನಾಳೆ ನಿಮಗೆ ಹುಟ್ಟುವ ಮಗು, ಗಂಡೋ ಹೆಣ್ಣೋ? ಎಂಬ ಕಾತುರ ಅಲ್ಲವೇ? ಮನೆಯ ಹಿರಿಯರು ಹೇಳುವುದುಂಟು, ಮಗು ಬಲಗಡೆಗಿದ್ದರೆ ಗಂಡಾಗುತ್ತದೆ, ಎಡಗಡೆಗಿದ್ದರೆ ಹೆಣ್ಣಾಗುತ್ತದೆ ಎಂದು, ಮಗು ಹೊಟ್ಟೆಯಲ್ಲಿ ಹೆಚ್ಚು ಚಲಿಸುತ್ತಿದ್ದರೆ ಹೆಣ್ಣು, ಪ್ರಸವ ಒಂಬತ್ತು ತಿಂಗಳು ದಾಟಿದರೆ ಹೆಣ್ಣು, ದಿನ ತುಂಬುವ ಮೊದಲೇ ವೇದನೆಯಾದರೆ ಗಂಡು ಎಂದು. ವೈಜ್ಞಾನಿಕವಾಗಿ ಹೇಳುವುದಾದರೆ ಇದು ಯಾವುದೂ ನಿಜವಲ್ಲ, ಗರ್ಭದಲ್ಲಿ ಮಗುವಿಗೆ ಗಂಡು-ಹೆಣ್ಣುತನಗಳನ್ನು

ನಿರ್ಧರಿಸುವುದು ಯಾವೂದು ಎಂಬ ಪ್ರಶ್ನೆ ನಿಮ್ಮನ್ನು ಕಾಡುತ್ತಿರಬೇಕಲ್ಲವೇ? ಇದನ್ನು ನಿರ್ಧರಿಸುವುದು ವೀರ್‍ಯಾಣುವಿನಲ್ಲಿರುವ ವರ್ಣಸೂತ್ರಗಳು"[೧]

ಅಂಡಾಣು ಹಾಗೂ ವೀರ್‍ಯಾಣುವಿನಲ್ಲಿ ತುಂಬಾ ಪ್ರಭಾವಶಾಲಿ ಯಾವ ಸೂಕ್ಷ್ಮವಾದ ಜೀವಕಣಗಳಿರುತ್ತವೆ ಇದನ್ನೇ ನಾವು ವರ್ಣಸೂತ್ರಗಳು ಎಂದು ಕರೆಯುವುದು, ಪ್ರತಿಯೊಂದು ವರ್ಣಸುತ್ರದಲ್ಲಿಯೂ ಸುಮಾರು ೧೫೦,೦೦೦ ಜೀನ್‌ಗಳು ಇರುತ್ತವೆ. ಇವು ಮಗುವಿನ ಗುಣ, ರೂಪ, ಬುದ್ಧಿಶಕ್ತಿ, ಸ್ವಭಾವ, ಬಣ್ಣ, ಇವೆಲ್ಲವನ್ನು ನಿರ್ಧರಿಸುತ್ತದೆ. ಅದೇ ರೀತಿಯಲ್ಲಿ ಅಂಡಾಣುವನ್ನೇ ಸಂಪರ್ಕಿಸಿದ ವೀರ್‍ಯಾಣುವಿನಲ್ಲಿ ೨೩ ಜೊತೆ ವರ್ಣ ಸೂತ್ರಗಳು XX ಗಂಪಿನವಾದರೆ ಹುಟ್ಟುವ ಮಗು ಹೆಣ್ಣಾಗುತ್ತವೆ, ಇಲ್ಲವೇ ೨೩ ಜೊತೆ ವರ್ಣಸೂತ್ರಗಳಲ್ಲಿ ಒಂದು ಜೊತೆ XY ನವು ಇದ್ದರೆ ಅದು ಗಂಡು ಎಂದು ತಿಳಿಯಬೇಕಾಗುತ್ತದೆ. ಹೀಗೆ ಇಂಥದ್ದೇ ರೀತಿ ಘಟಿಸಬೇಕೆಂದು ನಾವು ಪ್ರಯತ್ನ ಮಾಡಲು ಸಾಧ್ಯವಿಲ್ಲ, ಅದೇ ರೀತಿ ಬಯಸಿದ ಮಗುವನ್ನು ಪಡೆಯಲು ಆಗುವುದಿಲ್ಲ, ಅದೇ ರೀತಿ ಗರ್ಭದಲ್ಲಿ ಬೆಳೆಯುವ ಮಗು ಹೆಣ್ಣೋ, ಗಂಡೋ ಎಂದು ತಿಳಿಯಲು ಗರ್ಭ ಚೀಲದಲ್ಲಿರುವ ನೀರಿನ ದ್ರವವನ್ನು ಸೂಜಿಯ ಮೂಲಕ ಹೊರತೆಗೆದು ಅದರಲ್ಲಿರುವ ಜೀವಕಣಗಳ ಚುಕ್ಕೆಯಿಂದ ಮಗು ಯಾವುದೆಂದು ಪತ್ತೆ ಹಚ್ಚಬಹುದು, ಆದರೆ ಈ ರೀತಿಯೆಲ್ಲಾ ಮಗುವಿನ ಬಗ್ಗೆ ಹೆಣ್ಣೋ, ಗಂಡೋ ಎಂದು ತಿಳಿಯುವುದು, ಹೆಣ್ಣು ಭ್ರೂಣ ಎಮದು ಗೊತ್ತಾದಾಗ ಆ ಲಿಂಗವನ್ನು ಹತ್ಯೆ ಮಾಡುವುದು ಕಾನೂನುಬಾಹಿರ ಎಂಬ ಕಾಯಿದೆಯನ್ನು ಹೊರ ತಂದಿದೆ. ಹಾಗಾಗಿ ಭ್ರೂಣಲಿಂಗ ಪತ್ತೆ ಮಾಡುವ ಆಗಿಲ್ಲ. "ಗರ್ಭಿಣಿಯಾದವಳು ಆಹಾರವನ್ನು ಸೇವಿಸಬೇಕಾದಾಗ ಆಹಾರದ ಪೌಷ್ಠಿಕಾಂಶಗಳು ರಕ್ತದೊಳಗೆ ಹೀರಿಕೊಳ್ಳಲ್ಪಡುತ್ತವೆ, ದೇಹದ ಬೆಳವಣಿಗೆಗೆ ಇವು ನೆರವಾಗುತ್ತದೆ, ನಿಮ್ಮ ಗರ್ಭದಲ್ಲಿ ಇರುವ ಶಿಶು ನಿಮ್ಮ ರಕ್ತದಲ್ಲಿರುವ ಪೌಷ್ಠಿಕಾಂಶಗಳನ್ನು ಉಪಯೋಗಿಸಿ ಬೆಳೆಯುತ್ತದೆ, ಒಂದು ವೇಳೆ ನೀವು ತಿನ್ನುವುದನ್ನು ಕಡಿಮೆ ಮಾಡಿದರೆ ನಿಮ್ಮ ರಕ್ತದಲ್ಲಿರುವ ಅಂಶಗಳೂ ಕಡಿಮೆಯಾಗುತ್ತವೆ, ಆಗ ಮಗುವಿಗೂ ಸಾಕಷ್ಟು ಪೌಷ್ಠಿಕಾಂಶಗಳು ಸಿಗದೆ ಅದರ ಬೆಳವಣಿಗೆ ಕುಗ್ಗುತ್ತದೆ, ದೇಹಕ್ಕೆ ಅಗತ್ಯವಾದ ವಸ್ತುಗಳು ಇಲ್ಲದೆ ನೀವು ಕಾಯಿಲೆ ಬೀಳುತ್ತೀರಿ, ಆದುದರಿಂದ ಗರ್ಭಿಣಿ ಆಗಿರುವಾಗ ನೀವು ಪುಷ್ಠಿಕರವಾದ ಆಹಾರವನ್ನು ಸೇವಿಸಬೇಕು".

---

೧. ತಾಯಿ ಮಗು, ಪು. ೨೩.

ಗರ್ಭಿಣಿಯಾದ ಸ್ತ್ರೀಯು ಆಹಾರದಲ್ಲಿ ಹೆಚ್ಚು ಪೋಷಕಾಂಶವಿರುವ ಕ್ಯಾಲ್ಸಿಯಂ, ಕಬ್ಬಿಣ, ಸಕ್ಕರೆ, ಕೊಬ್ಬು ಹೇರಳವಾಗಿರುವ ವಿಟಮಿನ್‌ಗಳು ಸಿಗುವ ಆಹಾರವನ್ನು ಸೇವಿಸಬೇಕು ಯಾಕೆಂದರೆ ಎರಡು ಜೀವಗಳು ಇರುವುದರಿಂದ ಇದನ್ನು ತೆಗೆದುಕೊಳ್ಳಬೇಕು ಅದೇ ರೀತಿಯಲ್ಲಿ ಹಸಿರು ತರಕಾರಿ, ಸೊಪ್ಪು, ಮೊಟ್ಟೆ, ತುಪ್ಪ, ಬಾಳೆಹನ್ನು, ಕಿತ್ತಳೆಹಣ್ಣುಗಳು, ಮೋಸಂಬಿ ಹಣ್ಣು ಇವುಗಳನ್ನು ಸಾಕಷ್ಟು ಪ್ರಮಾಣದಲ್ಲಿ ಸೇವಿಸುವುದರಿಂದ ಹೊಟ್ಟೆಯೊಳಗಿರುವ ಮಗು ಮತ್ತು ತಾಯಿ ಆರೋಗ್ಯವಂತರಾಗಿವುದರಲ್ಲದೇ ಹೆರಿಗೆಯಲ್ಲಿ ಯಾವ ತೊಂದರೆಯೂ ಆಗುವುದಿಲ್ಲ, ಇಲ್ಲದಿದ್ದರೆ, ತಾಯಿಯಿಂದ ಮಗುವಿಗೆ, ತಾಯಿಗೆ ರಕ್ತಹೀನತೆಯಿಂದ ಮುಂದೆ ತೊಂದರೆಯಾಗುವ ಸಾಧ್ಯತೆಯಿರುತ್ತದೆ, ಅದೇ ರೀತಿ ಗರ್ಭಿಣಿಯಾದಾಗ 'ಸಾಕಷ್ಟು ವಿಶ್ರಾಂತಿ' ಬೇಕು, ನಿದ್ದೆ ಅಗತ್ಯ, ರಾತ್ರಿ ಎಂಟು ಗಂಟೆಗಳ ಕಾಲವಾದರೂ ಮಲಗಬೇಕು, ಅದೇ ರೀತಿ ದೇಹದ ಮಾಂಸಖಂಡಗಳಿಗೆ ವಿಶ್ರಾಂತಿಯಷ್ಟೇ "ವ್ಯಾಯಾಮವೂ ಅಗತ್ಯ" ಹಾಗೆಯೇ ಗರ್ಭಿಣಿಯಾಗಿರುವಾಗ ಮೊಲೆಗಳ "ಆರೈಕೆಯನ್ನು ಸಡಿಲವಾದ ಬ್ರೆಸರ್ಸ್ ಉಪಯೋಗದಿಂದ ಮೊಲೆಯು ಜೋತುಬೀಳುವುದಿಲ್ಲ, ಬ್ರೇಸರ್ಸ್ ಅನ್ನು ಬಿಗಿಯಾಗಿ, ಭದ್ರವಾಗಿ ಕಟ್ಟಬಾರದು, ಹಾಗೆಯೇ ಮೊಲೆ ತೊಟ್ಟನ್ನು ಸ್ನಾನ ಮಾಡುವಾಗ ಚೆನ್ನಾಗಿ ತೊಳೆದುಕೊಳ್ಳುತ್ತಿರಬೇಕು, ಗರ್ಭ ನಿಂತ ಮೂರು ತಿಂಗಳವರೆಗೆ ಗರ್ಭಪಾತ ಆಗುವ ಸಾಧ್ಯತೆ ಹೆಚ್ಚಾಗಿರುತ್ತದೆ. ಆದುದರಿಂದ ತುಂಬಾ ತೂಕವಾದ ಕೆಲಸಗಳನ್ನು ಈ ಸಮಯದಲ್ಲಿ ಗರ್ಭಿಣಿಯು ಮಾಡಬಾರದು, ಅದೇ ರೀತಿ ಹಲ್ಲುಗಳನ್ನು ಸ್ವಚ್ಚವಾಗಿಟ್ಟುಕೊಳ್ಳಬೇಕು, ಇಲ್ಲದಿದ್ದರೆ ಸೋಂಕುಗಳಿಂದ ಮಗುವಿನ ಹಲ್ಲಿಗೆ ಮುಂದೆ ಸೋಂಕು ಉಂಟಾಗಬಹುದು.

"ಮೂತ್ರಪಿಂಡದ ಸೋಂಕು ದೇಹದ ಯಾವುದೇ ಭಾಗದಲ್ಲಿರುವ ಕ್ರಿಮಿಗಳು ಮೂತ್ರಪಿಂಡವನ್ನು ಪ್ರವೇಶಿಸಬಹುದು, ಅದರಲ್ಲೂ ಗರ್ಭಿಣಿಯರಲ್ಲಿ ಹೆಚ್ಚು, ಏಕೆಂದರೆ ಅವಳ ಹಾಗೂ ಮಗುವಿನ ದೇಹದ ಅನುಪಯುಕ್ತ ವಸ್ತುಗಳನ್ನು ಹೊರ ದುಡುವುದು ಮೂತ್ರಪಿಂಡ, ಈ ಸೋಂಕು ತಗುಲಿದ ಕೂಡಲೇ ಚಳಿಜ್ವರ ಬರುತ್ತದೆ, ಸೊಂಟದ ಎರಡೂ ಭಾಗಗಳಲ್ಲಿ ನೋವು ಕಾಣಿಸಿಕೊಳ್ಳುತ್ತದೆ ಮೂತ್ರ ವಿಸರ್ಜನೆ ಆಗುವಾಗ ತುಂಬಾ ಉರಿಯಾಗುತ್ತದೆ, ಮೂತ್ರದಲ್ಲಿ ರಕ್ತವೂ ಬೀಳಬಹುದು,"[೧]

---

೧. ಮೂತ್ರಪಿಂಡ ಸೋಂಕು, ಅನುಪಮಾ ನಿರಂಜನ, ಪು. ೩೮.

ಗರ್ಭಿಣಿಯಿರುವಾಗ ಎಳನೀರು, ಬಾರ್ಲಿಹಕ್ಕಿನೀರು ಜೊತೆಗೆ ಕಾಯಿಸಿ ಆರಿಸಿದ ನೀರನ್ನು ಯಥೇಚ್ಛವಾಗಿ ಸೇವಿಸುವುದರಿಂದ ಮೂತ್ರಪಿಂಡದ ಸೋಂಕನ್ನು ನಿವಾರಿಸಬಹುದು. "ತಾಯ್ತನ ಚೇತೋಹಾರಿ" ನಾಳೆ ಆಗಮಿಸುವ ಮಗು ಆರೋಗ್ಯವಾಗಿಯೂ ಪುಷ್ಟಿಯಾಗಿಯೂ ಇರಬೇಕಾದರೆ, ಹೆರಿಗೆಯೂ ಯಾವ ತೊಂದರೆಗಳೂ ಇಲ್ಲದೆ ಸುಲಲಿತವಾಗಿ ಆಗಬೇಕೆಂದು ಇಚ್ಛೆಯಿದ್ದರೆ ಆಗಾಗ್ಗೆ ಡಾಕ್ಟರಿಂದ ಪರೀಕ್ಷೆ ಮಾಡಿಸಿಕೊಳ್ಳುವುದು.[೧]

ಗರ್ಭಿಣಿಯಾದ ಮೊದಲ ಆರುತಿಂಗಳು, ತಿಂಗಳಿಗೊಮ್ಮೆ ಡಾಕ್ಟರಲ್ಲಿಗೆ ಹೋದರೆ ಸಾಕು ಎಂಟು ತಿಂಗಳು ಪೂರ್ತಿಯಾಗುವವರೆಗೆ ಹದಿನೈದು ದಿನಗಳಿಗೊಮ್ಮೆ ಬರಬೇಕೆಂದು ಡಾಕ್ಟರ್ ಸೂಚಿಸಬಹುದು, ಒಂಭತ್ತನೆಯ ತಿಂಗಳು ವಾರಕ್ಕೊಮ್ಮೆಯಾದರೂ ಪರೀಕ್ಷೆ ಮಾಡಬೇಕಾಗುತ್ತದೆ, ಏಳು ತಿಂಗಳಾದ ಬಳಿಕ ಮಗು ಇರುವ ಸ್ಥಾನವನ್ನು ಹಾಗೂ ನೆಲೆಸುವ ಸ್ಥಾನವನ್ನು ಡಾಕ್ಟರು ತಿಳಿದುಕೊಂಡು ಪ್ರಸವದ ದೃಷ್ಟಿಯಿಂದ ಮಗುವಿನ ಸ್ಥಾನ ಬಹುಮುಖ್ಯ, ಮಗುವಿನ ತಲೆ ಕೆಳಗಿದ್ದರೆ ಪ್ರಸವ ಸುಲಭ, ಕಾಲು ಅಥವಾ ಪಿರೆಗಳು ಕೆಳಗಿದ್ದರೆ ಪ್ರಸವ ತುಸು ಕಷ್ಟವಾಗಬಹುದು, ಮಗು ಅಡ್ಡಲಾಗಿದ್ದರೆ ತಲೆಯನ್ನೋ ಕಾಲುಗಳನ್ನೋ ಕೆಳಗೆ ತರಲು ಡಾಕ್ಟರು ಪ್ರಯತ್ನಿಸಬಹುದು, ಇದು ಯಶಸ್ವಿ ಆಗದಿದ್ದರೆ 'ಸಿಸೇರಿಯನ್' ಎಂಬ ಶಸ್ತ್ರಕ್ರಿಯೆ ಮಾಡಿ ಹೊಟ್ಟೆ ಕೊಯ್ದು ಮಗುವನ್ನು ಹೊರತೆಗೆಯುತ್ತಾರೆ. ಒಟ್ಟಿನಲ್ಲಿ ಮಗುವಿನ ಹಾಗೂ ತಾಯಿಯ ಆರೋಗ್ಯದ ಪೂರ್ಣ ಅನುಕ್ರಮಿತ ಪರಿಚಯವುಳ್ಳ ಡಾಕ್ಟರಿಗೆ ಗರ್ಭಿಣಿಗೆ ಯಾವ ತೊಂದರೆಯೂ ಆಗದಂತೆ ಕಾಯಿಲೆ ಬಾರದಂತೆ ನೋಡಿಕೊಳ್ಳುವುದು, ಪ್ರಸವ ಕಾಲದಲ್ಲಿ ಯಾವ ತೊಂದರೆ ಬಂದರೂ ಅಷ್ಟೇ ಸುಲಭವಾಗಿ ನಿವಾರಿಸಲು ಅವರಿಂದ ಸಾಧ್ಯವಾಗುತ್ತದೆ, ಇದನ್ನು ಅನುಪಮಾರವರು ತಾಯಿ–ಮಗು ಎಂಬ ಪುಸ್ತಕದಲ್ಲಿ ಸವಿಸ್ತಾರವಾಗಿ ವಿವರಿಸಿದ್ದಾರೆ.

ಮತ್ತೊಂದು ಉತ್ತಮವಾದ ಪುಸ್ತಕವೆಂದರೆ "ಒತ್ತಡದ ಬೇನೆ" ಇದರಲ್ಲಿ ಮನಸ್ಸು ಮತ್ತು ದೇಹದ ಸಂಬಂಧಗಳ ಬಗ್ಗೆ ಅಂದರೆ ಒತ್ತಡಗಳಿಂದ ಮನುಷ್ಯನ ಭಾವೋದ್ವೇಗಗಳಲ್ಲಿ ಏರಿಳಿತಗಳು ಹೆಚ್ಚಾಗಿ ಹಲವು ರೋಗಗಳಿಗೆ ಕಾರಣವಾಗುತ್ತಾನೆ. ನಿದ್ರಾನಂತರದಿಂದ ಹೃದಯಾಘಾತದವರೆಗೆ ಹಲವು ತೊಡಕುಗಳ ಸ್ವರೂಪವನ್ನು ಅನುಸರಿಸಬೇಕಾದ ಮುನ್ನೆಚ್ಚರಿಕೆ ಮತ್ತು ಚಿಕಿತ್ಸೆಯನ್ನು ಇಲ್ಲಿ ನೀಡಲಾಗಿದೆ.

---

೧. ತಾಯಿ–ಮಗು, ಅನುಪಮಾ ನಿರಂಜನ, ಪು. ೪೧.

"ಯುವಕನೊಬ್ಬ ಶ್ರೀಮಂತ ಹುಡುಗಿಯನ್ನು ಮದುವೆಯಾಗಿರುತ್ತಾನೆ, ಅವಳ ನಿರೀಕ್ಷೆಯಷ್ಟು ಹಣ ಮತ್ತು ಪದವಿಗಳಿಲ್ಲ. ಬೆಳಿಗ್ಗೆ ತಿಂಡಿ ತಿನ್ನುವಾಗಲೆ ಅವಳು ಈ ಬಗ್ಗೆ ಹಂಗಿಸುತ್ತಾಳೆ, ಯುವಕ ಆಫೀಸಿಗೆ ಹೋದಾಗ, ಮನಸ್ಸಿಗೆ ಸಂಕಟವನ್ನು ತನ್ನ ಗುಮಾಸ್ತನನ್ನು ಬಯ್ಯುವುದರ ಮೂಲಕ ತೀರಿಸಿಕೊಳ್ಳುತ್ತಾನೆ, ಕೆಲಸದಲ್ಲಿ ಅವನು ಗಮನ ಕೇಂದ್ರೀಕರಿಸಲಾರ, ಆಗ ಅಪರೂಪಕ್ಕೆ ಬಂದ ಹಿರಿಯ ಅಧಿಕಾರಿ ಇವನಿಗೆ ಛೀಮಾರಿ ಹಾಕುತ್ತಾನೆ. 'ಕೆಲಸ ಕಳೆದುಕೊಳ್ಳುತ್ತೀರಿ' ಎಂದು ಹೆದರಿಸುತ್ತಾನೆ, ಯುವಕ ಮನೆಗೆ ಬರುವ ಹೊತ್ತಿಗೆ ವಿಪರೀತ ತಲೆನೋವು, ಮಾತ್ರೆ ಸೇವನೆಯಲ್ಲೂ ಇದು ಕಡಿಮೆಯಾಗುವುದಿಲ್ಲ, ಅವನ ಅಹಂಗೆ ಪೆಟ್ಟು ಬಿದ್ದಿದೆ, ಒಂದು ಕಡೆ ಏಣಿಯಲ್ಲಿ ಮೇಲೇರಬೇಕು ಎನ್ನುವ ಆಸೆ, ಅದು ಸಾಧ್ಯವಾಗಲಾರದು ಎಂಬ ನಿರಾಸೆ ಇನ್ನೊಂದೆಡೆ, ಹಾಗಾಗಿ ಅವನಿಗೆ ಕಾಣಿಸಿಕೊಳ್ಳುವ ತಲೆನೋವು, ಪ್ರತಿಭಟಿಸುವ ಮನಸ್ಸಿನ ಸಂಕೇತ ಮಾತ್ರವಲ್ಲದೆ ಹೆಂಡತಿಯ ಕನಿಕರವನ್ನು ಅಪೇಕ್ಷಿಸುವ ಚಿಹ್ನೆಯೂ ಹೌದು"[೧] ಉದ್ವೇಗ ಮಾನಸಿಕ ಒತ್ತಡ ಹೆಚ್ಚಾದಾಗ ತಲೆನೋವು ತುಂಬಾ ಜನರಿಗೆ ಕಾಣಿಸಿಕೊಳ್ಳುತ್ತದೆ, ಇದರಿಂದಾಗಿ ನಿದ್ರೆಯು ಬರುವುದಿಲ್ಲ, ಹಸಿವು ಉಂಟಾಗದೆ ಆಯಾಸ, ಸುಸ್ತು ಪದೇ ಪದೇ ಮೂತ್ರ ವಿಸರ್ಜನೆಯಾಗುವುದು, ಅಲ್ಲದೆ ಅಧಿಕ ರ್‍ಕತದ ಒತ್ತಡಗಳು ಚರ್ಮರೋಗ ಇವೆಲ್ಲವೂ ಕೂಡ ಒತ್ತಡದ ಬೇನೆಯಿಂದ ಒಬ್ಬ ವ್ಯಕ್ತಿಯ ಶರೀರದಲ್ಲಿ ಒಳಗೆ ಹಾಗೂ ಹೊರಗೂ ದುಷ್ಪರಿಣಾಮವನ್ನುಂಟು ಮಾಡುತ್ತದೆ. ಈ ರೀತಿಯ ಒತ್ತಡಗಳಿರುವ ವ್ಯಕ್ತಿಯ ರೋಧ ಪ್ರತಿರೋಧಕ ಶಕ್ತಿ ಕುಗ್ಗುವುದರಿಂದ ಅವನು ಬಲುಬೇಗ ಕಾಯಿಲೆಗೆ ತುತ್ತಾಗುವ ಸಾಧ್ಯತೆ ಜಾಸ್ತಿಯಾಗಿರುತ್ತದೆ, ಈ ಕಾಯಿಲೆಯಿಂದ ಗುಣಮುಖವಾಗುವುದು ತುಂಬಾ ಕಡಿಮೆ, ಇಂತಹ ವ್ಯಕ್ತಿಗೆ ಬೇಗ ಮುಪ್ಪು ಆವರಿಸುವುದಲ್ಲದೆ ಸಾವಿಗೆ ಆಹ್ವಾನವನ್ನು ನಾವೇ ತಂದುಕೊಂಡಂತೆ ಆಗುತ್ತದೆ.

ಒತ್ತಡದ ಅನುಭವವು ಭಿನ್ನವಾಗಿರುತ್ತದೆ, ವ್ಯಕ್ತಿ ವ್ಯಕ್ತಿಗಳಲ್ಲಿ ಅವರ ಮಾನಸಿಕ ಬಲವನ್ನು ಅವಲಂಬಿಸಿರುತ್ತದೆ, ಒಬ್ಬ ವ್ಯಕ್ತಿಯು ತನ್ನ ಹಿರಿಯ ಅಧಿಕಾರಿಯಿಂದ ಆಗಿರುವ ಅವಮಾನವನ್ನು ತನ್ನ ಹೆಂಡತಿಗೆ ಹೊಡೆಯುವುದರ ಮೂಲಕ ತೋರಿಸಕೊಳ್ಳಬಹುದು, ಅದೇ ರೀತಿಯಲ್ಲಿ ವಿದ್ಯಾರ್ಥಿಯು ಪರೀಕ್ಷೆಗೆ ಓದಿಕೊಳ್ಳುವಾಗ ಆ ಪರೀಕ್ಷೆ ಹೇಗೆ ಎದುರಿಸುವುದು, ಅದರಲ್ಲಿ ಪೇಲಾದರೆ ಅಪ್ಪ, ಅಮ್ಮ ನನ್ನನ್ನು ಸುಮ್ಮನೆ ಬಿಡುತ್ತಾರೆಯೇ ಎಂದು ಎಲ್ಲಿಗಾದರೂ ಹೋಗಿ ಬಿಡಬೇಕೆಂಬ

---

೧. ಒತ್ತಡದ ಬೇನೆಗಳು, ಅನುಪಮಾ ನಿರಂಜನ, ಪು. ೧೮.

ತೀರ್ಮಾನಮಾಡಿಕೊಳ್ಳುವುದು ಅನಂತರ ಆ ಪರೀಕ್ಷೆಯು ಅಷ್ಟು ಮಹತ್ತರವಾದುದೇ ಅಲ್ಲ ಎಂದು ಗೊಂದಲಮಾಡಿಕೊಳ್ಳುವುದು, ಅತಿಯಾದ ಗಾಬರಿ ಮಾಡಿಕೊಂಡು ಪರೀಕ್ಷೆ ಸಮಯದಲ್ಲಿ ಬೇದಿಯಾಗುವುದು, ಜ್ವರ ಬರುವುದು ಇದೆಲ್ಲಾ ಕಾರಣವನ್ನು ಒಡ್ಡಿ ಪರೀಕ್ಷೆಯಿಂದ ತಪ್ಪಿಸಿಕೊಳ್ಳುವುದು ಕೂಡಾ ಒತ್ತಡದ ಬೇನೆ ಎಂದು ಅರಿಯಬಹುದಾಗಿದೆ. ಇದಕ್ಕೆ ಕಾರಣವೇನೆಂದರೆ ಒತ್ತಡವನ್ನು ನಿಭಾಯಿಸುವ ವಿಧಗಳು, ಅದನ್ನು ನಿಯಂತ್ರಿಸುವ ರೀತಿ, ಮಾನಸಿಕ, ಹಾಗೂ ದೈಹಿಕ ಇವೆರಡೂ ಆಗಿದ್ದು, ನಿಭಾಯಿಸಲು ವ್ಯಕ್ತಿ ಇರುವ ಶಕ್ತಿ ಸಾಮರ್ಥ್ಯವನ್ನು ಅವಲಂಬಿಸಿರುತ್ತದೆ, ಇದು ಸರಿಯಾಗಿಲ್ಲದಿದ್ದರೆ ಒತ್ತಡ ಮುಂದುವರೆದು ಕೆಟ್ಟ ಪರಿಣಾಮಗಳುಂಟಾಗುತ್ತದೆ. ಈ ಒತ್ತಡ ಮುಂದುವರೆದು ಕೆಟ್ಟ ಪರಿಣಾಂಗಳುಂಟಾಗುತ್ತದೆ. ಈ ಒತ್ತಡದ ಅನುಭವವು ಕೋಪ, ಭಯ, ಆತಂಕ, ಖಿನ್ನತೆ, ಹೆದರಿಕೆ, ನಾನೇನು ತಪ್ಪು ಮಾಡಿದ್ದೀನಿ ಅನ್ನುವ ಪ್ರಜ್ಞೆ ಮುಂತಾದ ಭಾವನೆಗಳೊಂದಿಗೆ ಕೂಡಿರುತ್ತದೆ. ಅಂದರೆ ಒತ್ತಡದ ಅನುಭವ ಯಾವಾಗಲೂ ಭಾವನಾತ್ಮಕವಾದುದು ಎಂದು ನಾವು ತಿಳಿಯಬಹುದಾಗಿದೆ.

ಈ ಎಲ್ಲಾ ರೀತಿಯ ಒತ್ತಡಗಳಿಂದ ಪಾರಾಗಲು ಮನುಷ್ಯನಿಗೆ ಮೊದಲು ಸಂಯಮವಿರಬೇಕು, ಅದೇ ರೀತಿಯಲ್ಲಿ ಯಾವುದೇ ಕೆಲಸಗಳನ್ನು ಮಾಡುವಾಗ ಹೆಚ್ಚು ಕೆಲಸಗಳ ಜವಾಬ್ದಾರಿಯನ್ನು ಒಂದೇ ದಿನದಲ್ಲಿ ಅಥವಾ ಸಮಯದಲ್ಲಿ ತೆಗೆದುಕೊಳ್ಳಬಾರದು ನಮ್ಮ ಸಾಮರ್ಥ್ಯಕ್ಕೆ ಅನುಗುಣವಾಗಿ ಕೆಲಸಕಾರ್ಯಗಳನ್ನು ನಿಭಾಯಿಸುವುದು ಒಳ್ಳೆಯದು, ಅದರ ಜೊತೆಗೆ ಸಮಯಕ್ಕೆ ಸರಿಯಾಗಿ ಊಟ ತಿಂಡಿಗಳ ಸೇವನೆ, ಹಾಗೆಯೇ ಅಗತ್ಯಕ್ಕೆ ಅನುಸಾರವಾಗಿ ನಿದ್ರೆಯನ್ನು ಮಾಡುವುದರಿಂದ ಶರೀರದ ಅಯಾಸವೆಲ್ಲಾ ಮಾಯವಾಗಿ ಲವಲವಿಕೆಯುಂಟಾಗಲು ಸಾಧ್ಯ. ಇದನ್ನು ಅನುಪಮ ನಿರಂಜನರು ಒತ್ತಡದ ಬೇನೆ ಎಂಬ ಪುಸ್ತಕದಲ್ಲಿ ವಿವರಿಸಿದ್ದಾರೆ. ಒತ್ತಡದ ನಿವಾರಣೆಗೆ ಯೋಗಾಸನಗಳನ್ನು ಬರೆದಿದ್ದಾರೆ.

ಅನುಪಮಾ ಅವರು 'ದಾಂಪತ್ಯ ದೀಪಿಕೆ'ಯನ್ನು ಲೈಂಗಿಕ ಜೀವನದ ಬಗ್ಗೆ ಗಂಡು-ಹೆಣ್ಣಿಗೆ ಇರಬೇಕಾದ ಹಲವು ಮಜಲಿನ ತಿಳುವಳಿಕೆಯನ್ನು ಇದರಲ್ಲಿ ವಿವರಿಸಿದ್ದಾರೆ. ಅದೇನೆಂದರೆ ಮದುವೆ ಎಂದರೇನು? ಒಬ್ಬರಿಗೊಬ್ಬರು ಆಸೆಪಟ್ಟು ಮೆಚ್ಚಿದ ಎರಡು ಜೀವಗಳು ಯಾವ ತೊಂದರೆಗಳೂ ಇಲ್ಲದೆ ಪ್ರೇಮ-ಪ್ರೀತಿ, ಕಾಮಗಳನ್ನು ಒಟ್ಟಿಗೆ ಅನುಭವಿಸಲು ಮಾಡಿಕೊಂಡ ಬಂಧನ ವಿವಾಹವೇ ಎನ್ನಬೇಕು, ಅಥವಾ ಲೈಂಗಿಕ ಸಂಬಂಧ, ಅನುಬಂಧ ಮಾತ್ರವೇ ಅಲ್ಲದೆ ಆರ್ಥಿಕ, ಬೌದ್ಧಿಕ ಹಾಗೂ

ಮಾನಸಿಕವಾಗಿ ಒಬ್ಬರಿಗೊಬ್ಬರು, ಪರಸ್ಪರರಿಗೆ ಜವಾಬ್ದಾರಿಯಿಂದ ಬಾಳು ನಡೆಸುವುದು ಮದುವೆಯ ಉದ್ದೇಶ ಎನ್ನಬಹುದಾಗಿದೆ.

"ಹಿಂದೂ ಧರ್ಮದಲ್ಲಿ ಶಾಸ್ತ್ರದ ವಿವಾಹದ ಸಾಧನೆಗಳಿಗೆ ಇರುವ ವ್ಯಾಪ್ತಿ ಅಪಾರ, ಮದುವೆಯಾದ ಸತಿಪತಿಗಳು ಬದುಕಿನುದ್ದಕ್ಕೂ ಧರ್ಮ, ಅರ್ಥ, ಕಾಮ, ಮೋಕ್ಷಗಳ ಸಾಧನೆಗಾಗಿ ಜೊತೆಯಲ್ಲಿ ಬಾಳಬೇಕು, ಬೌದ್ಧಿಕ ಉನ್ನತಿಗಾಗಿ ಧರ್ಮ ಶರೀರದ ಪೋಷಣೆಗಾಗಿ ಅರ್ಥ, ಮನಸ್ಸಿನ ಸಂತೃಪ್ತಿಗಾಗಿ ಕಾಮ ಆತ್ಮೋನ್ನತಿಗಾಗಿ ಮೋಕ್ಷ ಎಂಬುದು ಭಾರತೀಯರ ನಂಬಿಕೆ, ಧರ್ಮ ಮೋಕ್ಷಗಳ ಪಾಠ ಪಾರಲೌಕಿಕ ಸುಖಕ್ಕಾದರೆ ಅರ್ಥ ಕಾಮಗಳ ಅಧ್ಯಯನ ಐಹಿಕ ಸುಖಕ್ಕೋಸ್ಕರ. ಆದ್ದರಿಂದ ಸತಿಪತಿಗಳ ಸಾರ್ಥಕ ಬದುಕಿಗೆ ಇವೆರಡರ ಅಧ್ಯಯನ ಮಾಡುವುದು ಅವಶ್ಯಕವಾಗಿದೆ."[೧]

ಮೇಲೆ ತಿಳಿಸಿದ ಸಂಗತಿಗಳಲ್ಲಿ ಮನುಷ್ಯನಿಗೆ ಮದುವೆಯಾಗುವುದರಿಂದಾಗಿ ಏನೆಲ್ಲಾ ಪ್ರಯೋಜನಗಳನ್ನು ಪಡೆಯಬಹುದು ಎಂಬುದನ್ನು ತಿಳಿಯಲಾರಂಭಿಸಿದಾಗ ವಿವಾಹವಾಗುವುದರಿಂದ ಒಂದು ಹೆಣ್ಣಿನ ಜೀವನಕ್ಕೆ ಆಧಾರಸ್ಥಂಭವಾಗುತ್ತದೆ. ಅವಳ ಪ್ರೀತಿಗೆ ಇಂಬು, ಹೆಣ್ಣಿನ ಬದುಕಿಗೆ, ಬೆಳವಣಿಗೆಗೆ ಈ ಮದುವೆಯೆಂಬುದು ದೊಡ್ಡ ಆಸರೆ, ಇದರಿಂದಾಗಿ ಮದುವೆಯಾದ ಗಂಡಿಗೂ ವಾಸಿಸುವುದಕ್ಕೆ ಮನೆ, ಸರಿಯಾದ ಸಮಯಕ್ಕೆ ಹೆಂಡತಿ ಊಟ ಮಾಡಿಬಡಿಸುವುದು, ಅದರ ಜೊತೆಗೆ ದೈಹಿಕವಾಗಿ ಇಬ್ಬರಿಗೂ ಸುಖ ಸಿಗುವುದಲ್ಲದೆ ಕಷ್ಟಸುಖಗಳಲ್ಲಿ ಸಮಪಾಲನ್ನು ಪಡೆಯಲು ಸಹಕಾರಿಯಾಗುತ್ತದೆ, ಹೆಣ್ಣುಗಂಡುಗಳ ಸಾಧನೆಗೆ ವೈವಾಹಿಕ ಜೀವನ ಬಲು ಪ್ರಮುಖ ಹಿನ್ನೆಲೆ ಆಗುತ್ತದೆ. ಯಾವುದೇ ಸಮಸ್ಯೆಗಳು, ಅಥವಾ ಸುಖ ಸಂತೋಷಗಳು ಬಂದಾಗ ಅದನ್ನು ಎದುರಿಸಲು ಅದರಿಂದ ಆತ್ಮೀಯತೆ, ಆತ್ಮವಿಶ್ವಾಸಗಳು ಈ ವಿವಾಹ ಬಂಧನದಿಂದ ಮೂಡುತ್ತದೆ. ಇದರಿಂದಾಗಿ ಇಬ್ಬರ ವ್ಯಕ್ತಿತ್ವವೂ ಮಾಗುತ್ತದೆ. ಆದುದರಿಂದಲೆ ಸಮಾಜದಲ್ಲಿ ಎಲ್ಲೆಡೆಯೂ ಗೌರವ ಆದರಗಳು ಸಿಗುವುದಕ್ಕೆ ಇದರಿಂದ ಸಾಧ್ಯ. ಅದೇ ರೀತಿ ನಮ್ಮ ಸಮಾಜಿಕವಾದ ಚೌಕಟ್ಟಿನಲ್ಲಿ ಗಂಡು-ಹೆಣ್ಣುಗಳ ವಿವಾಹ ಶಾಶ್ವತವಾದ ಬಂಧನ, ಇವರಿಬ್ಬರಿಗೂ ಅದರಿಂದ ಬಿಡುಗಡೆಯಿಲ್ಲ, ಆದುದರಿಂದಲೇ ವಿವಾಹಕ್ಕೆ ಮುನ್ನ ಇಬ್ಬರೂ ಅತ್ಯಂತ ಜಾಗರೂಕರಾಗಿರಬೇಕಾದುದು ಅವಶ್ಯಕ, ಇದರ ಜೊತೆಗೆ ಗಂಡುಹೆಣ್ಣುಗಳ ದೈಹಿಕ ಪರೀಕ್ಷೆಯನ್ನೂ ಮಾಡಿಸಿಕೊಂಡು ಯಾವುದೇ

---

೧. ದಾಂಪತ್ಯ ದೀಪಿಗೆ, ಅನುಪಮಾ ನಿರಂಜನ, ಪು. ೧೧.

ಲೋಪದೋಷಗಳಿಲ್ಲ ಎಂದು ಕಂಡುಬಂದಾಗ ಸಂಸಾರದಲ್ಲಿ ಮಕ್ಕಳಾಗಲಿಲ್ಲ ಎಂದು ಮನೆಯವರ ಹಿಂಸೆಗಳಿಂದ ಮುಕ್ತರಾಗಬಹುದು. ಇದು ಮದುವೆಗೆ ಮುಂಚೆಯೇ ಚರ್ಚಿಸಿ ವೈದ್ಯರಿಂದ ಸಲಹೆಯನ್ನು ಪಡೆದು ವಿವಾಹವಾಗುವುದರಿಂದ ದಾಂಪತ್ಯದಲ್ಲಿ ತೊಡಕುಗಳಿಲ್ಲದೆ ಸುಖಿಯಾದ ಜೀವನ ಸಾಧ್ಯ.. ವಿವಾಹವಾದ ಮೇಲೆ ಲೈಂಗಿಕ ಜೀವನ ಬಹಳ ಪ್ರಮುಖವಾದುದು, ಸಂಯೋಗ ಎಂದರೇನು? ಎಂಬುದನ್ನು ಇಬ್ಬರು ಗಂಡು ಹೆಣ್ಣುಗಳು ಪರಸ್ಪರ ಒಪ್ಪಿಗೆಯಿಂದ ನಡೆಯುವ ಲೈಂಗಿಕ ಕ್ರಿಯೆ, ಇವರಿಬ್ಬರೂ ಸಂಭೋಗ ನಡೆಸಿದಾಗ ಎರಡು ದೇಹಗಳು ಒಂದಾಗಿ ಅತೀವ ತೃಪ್ತಿಯಾಗುತ್ತದೆ, ಸಮನ ಬಯಕೆಗಳಿಂದ ಮಾತ್ರ ಲೈಂಗಿಕ ತೃಪ್ತಿಯಾಗುತ್ತದೆ, ಸಮಾನ ಬಯಕೆಗಳಿಂದ ಮಾತ್ರ ಲೈಂಗಿಕೋದ್ರೇಕ ಪರಾಕಾಷ್ಠೆ ಮುಟ್ಟುತ್ತದೆ, ಇದರಿಂದಾಗಿ ಯೋನಿಯೊಳಗೆ ವೀರ್ಯಪತನವಾಗಿ ಗರ್ಭಧಾರಣೆಯಾಗಬೇಕು ಎಂಬುದೇ ಅಲ್ಲ ಪರಸ್ಪರ ಇವರಿಬ್ಬರ ಲೈಂಗಿಕ ಆಸೆಯ ಪೂರೈಕೆಯೂ ಇಲ್ಲಿ ಮುಖ್ಯ.

"ಮದುವೆಯಾದ ಮೊದಲ ದಿನಗಳಲ್ಲಿ ಗಂಡಿಗೆ ಹೆಣ್ಣಿನ ಒಲವನ್ನು ಗಳಿಸಿಕೊಳ್ಳುವ ಕಾರ್ಯ ಸುಲಭವೇನಲ್ಲ, ಹೆಣ್ಣು ಮಡಿವಂತರ ಮನೆಯೆಲ್ಲ ಹುಟ್ಟಿ ಬೆಳೆದು ನಾಚಿಕೆಯ ಮುಗ್ಧೆಯಾದರೆ ಅವಳನ್ನು ಪ್ರೇಮಿಯನ್ನಾಗಿ ಮಾಡಲು ಗಂಡು ತನ್ನ ಬುದ್ಧಿಯನ್ನೆಲ್ಲಾ ಉಪಯೋಗಿಸಬೇಕಾಗುತ್ತದೆ. ಆತ ಒರಟಾಗಿ ವರ್ತಿಸಿದನೋ ಅವರ ವೈವಾಹಿಕ ಜೀವನವೇ ಮುರಿದು ಬೀಳುವ ಅಪಾಯವಿದೆ."

ಮದುವೆಯಾದ ಯುವಕ ಹೆಣ್ಣಿನೊಡನೆ ಅಂದರೆ ತನ್ನ ಹೆಂಡತಿಯ ಜೊತೆ ಪ್ರಾರಂಭದಲ್ಲಿ ಅಕೆಯ ಸೂಕ್ಷ್ಮಗಳನ್ನು ಹಾಗೂ ಆಕೆಯ ಪ್ರೀತಿ ಒಲವುಗಳನ್ನು ಗಳಿಸಿಕೊಂಡು ಆನಂತರ ದೇಹ ಮತ್ತು ಮನಸ್ಸುಗಳು ಒಂದಾಗುವುದಕ್ಕೆ ಪ್ರಯತ್ನಿಸುವುದು ಒಳ್ಳೆಯದು ಇಲ್ಲದಿದ್ದರೆ ಒರಟಾಗಿ ವರ್ತಿಸಿದರೆ ಗಂಡನ ಬಗ್ಗೆ ಮತ್ತು ರಾತ್ರಿಯೆಂದರೆ ಕರಾಳದಿನಗಳು ಎಂದು ಅಕೆಯಲ್ಲಿ ಜುಗುಪ್ಸೆಯುಂಟಾಗುವುದಕ್ಕೆ ಕಾರಣವಾಗಬೇಕಾಗುತ್ತದೆ. ಆದುದರಿಂದ ಗಂಡಿಗೆ ಸ್ವಲ್ಪದಿನಗಳವರೆಗೆ ಸಂಯಮದಿಂದ ವರ್ತಿಸಿ ಹೆಂಡತಿಯ ಒಲವುಗಳಿಸಿ ದೇಹ ಸಂಪರ್ಕವಿರಿಸಿದಾಗ ಇವರ ದಾಂಪತ್ಯವು ಯಾವುದೇ ಅಡೆತಡೆಗಳು ಇಲ್ಲದೆ ಒಬ್ಬರನ್ನೊಬ್ಬರು ಅರ್ಥ ಮಾಡಿಕೊಂಡು ಸಂಸಾರವನ್ನು ನಿಭಾಯಿಸಲು ಅನುವು ಮಾಡಿಕೊಡುತ್ತದೆ. ಅನುಪಮಾರವರು ದಾಂಪತ್ಯದೀಪಿಕೆಯಲ್ಲಿ ತುಂಬಾ ಸವಿಸ್ತಾರವಾಗಿ ಹೆಣ್ಣಿನ ಗರ್ಭಧಾರಣೆಯಿಂದ ಹಿಡಿದು ಆಕೆಯ ದೇಹರಚನೆ ಹಾಗೂ ಮಗುವು ಆಗಬೇಕಾದರೆ ಏನೆಲ್ಲಾ ಕ್ರಮಗಳನ್ನು ಅನುಸರಿಸಬೇಕು ದೈಹಿಕಕ್ರಿಯೆ ಹೇಗೆ ನಡೆಯುತ್ತದೆ, ಗರ್ಭಧಾರಣೆಯು ಉಂಟಾಗುವ

ರೀತಿ, ಅದೇ ರೀತಿ ಅಂಡಾಣುವಿನ ಕೆಲಸವೇನು? ಮಗುವಾಗುವುದು ಹೇಗೆ ಎಂಬುದರ ಜೊತೆಗೆ ಪುರುಷನ ಜನನೇಂದ್ರಿಯಗಳ ಬಗ್ಗೆ ಸವಿಸ್ತಾರವಾಗಿ ವಿವರಿಸಿದ್ದಾರೆ. ಇದರಿಂದಾಗಿ ಆ ಕಾಲದಲ್ಲಿಯೇ ಅಂದಿನ ಜನತೆಯ ದಂಪತಿಗಳ ಬದುಕನ್ನು ಸರಿಪಡಿಸುವುದಲ್ಲದೇ ಮುಂದಿನ ಜನತೆಯ ಬಾಳನ್ನು ಹೇಗೆ ಸುಂದರವಾಗಿಟ್ಟುಕೊಳ್ಳಬೇಕು ಎಂಬುದೆಲ್ಲಾ ದಾಂಪತ್ಯದೀಪಿಕೆ ಪುಸ್ತಕದಲ್ಲಿ ಕಣ್ಣಿಗೆ ಕಟ್ಟುವಂತೆ ಮನಮೋಹಕವಾಗಿ ಇವರು ಬರೆದಿದ್ದಾರೆ. ವೈದ್ಯೆಯಾಗಿ ಸ್ತ್ರೀ ಪುರುಷರಿಗೆ ಅನುಕೂಲವಾಗುವಂತೆ ಅವರ ಸಮಸ್ಯೆಗಳಿಗೆ ತಕ್ಕಂತೆ ಉತ್ತರಗಳನ್ನು ಈ ಪುಸ್ತಕದಲ್ಲಿ ವಿವರಿಸಿದ್ದಾರೆ, ಇವರ ಕೊಡುಗೆ ತುಂಬಾ ಪ್ರಮುಖವಾದುದು.

ಹೆಣ್ಣಿನ ಬಗೆಗೆ ಅನುಪಮ ಅವರು ಬರೆದಂತೆ ಆಕೆಯು ಕಿಶೋರಾವಸ್ಥೆ, ವಧುವಿನ ಸಂದರ್ಭಗಳಿಂದ ತಾಯ್ತನಕ್ಕೆ ಕಾಲಿಡುವ ಬಗ್ಗೆ ಜಾಗರೂಕತೆಯನ್ನು ಮೂಡಿಸುತ್ತಾರೆ. ಇವರು ವೈದ್ಯೆಯಾಗಿದ್ದು ತಾಯ್ತನ ಮತ್ತು ಶಿಶುವಿನ ಪೋಷಣೆ ಹೇಗಿರಬೇಕು, ಆರೋಗ್ಯವಂತ ತಾಯಿಯಿಂದ ಮಗು ಹೇಗೆ ಇರುತ್ತದೆ, ಅನಾರೋಗ್ಯದಿಂದ ಪಡೆದ ತಾಯಿಯಿಂದ ಪಡೆದ ಮಗು ಹೇಗಿರುತ್ತದೆ ಎಂಬುದನ್ನು ವಿವರವಾಗಿ ಚಿತ್ರಿಸಿದ್ದಾರೆ. ಮಗುವಿನ ಪೋಷಣೆ ಪಾಲನೆ ಹೇಗಿರಬೇಕು ಶಿಶು ವೈದ್ಯೆ ದೀಪಿಕೆಯಲ್ಲಿದೆ. ತಾಯಿ–ಮಗು ಈ ರೀತಿಯ ಪುಸ್ತಕಗಳು ಗ್ರಾಮೀಣ ಮಹಿಳೆಯರಿಗಾಗಿ ಬರೆದರು ಇದಕ್ಕೆ ೧೯೬೮ರಿಮದ ೧೯೯೧ರ ವರೆಗೆ ಮೂರು ಸಾವಿರ ಪ್ರತಿಗಳ ಹದಿನೈದು ಮುದ್ರಣಗಳನ್ನು ಕಂಡಿದೆ. ತಾಯ್ತನ ಮತ್ತು ಪೋಷಣೆಯ ಬಗ್ಗೆ ನೂರಾರು ಮೂಢನಂಬಿಕೆಗಳು ಇರುವಾಗ ಈ ರೀತಿಯ ವೈದ್ಯಕೀಯ ಪುಸ್ತಕಗಳು ಉಪಯುಕ್ತವಾಗಿರುತ್ತವೆ. ವೈದ್ಯವೃತ್ತಿಯೊಂದಿಗೆ ತಾಯಿಯಾಗಿ ಅನುಪಮ ಅವರು ಪಡೆದಿದ್ದ ಅನುಭವವೂ ಇವುಗಳಲ್ಲಿ ಸೇರಿಕೊಂಡಿದೆ. ಈ ಬಗ್ಗೆ ಒಬ್ಬ ವಿಮರ್ಶಕರು ಹೇಳುವಂತೆ 'ಅನುಪಮಾ ಅವರ ವೈದ್ಯಕೀಯ ಗ್ರಂಥಗಳಲ್ಲಿ ಕೆಲವು ಹಳೆಯ ಸಂಶೋಧನೆ, ತೀರ್ಮಾನಗಳು ಸೇರಿಕೊಂಡಿವೆ. ಕೆಲವು ಕಡೆ ತಪ್ಪು ಮಾಹಿತಿಯೂ ಇದೆ ಎಂಬುದನ್ನು ವೈದ್ಯೆಯೂ ಲೇಖಿಕಿಯೂ ಆದ ಎಚ್.ಗಿರಿಜಮ್ಮ ಪ್ರಸ್ತಾಪಿಸಿದ್ದಾರೆ.[೧] ಆರ್.ಎಚ್. ನಕಾರಾತ್ಮಕವಾಗಿದ್ದಾಗಲೂ ಮಗುವನ್ನು ಪಡೆಯ ಬಹುದಾದ ಹಾಗೂ ಮಗುವನ್ನು ಉಳಿಸಬಹುದಾದ ಸಾಧ್ಯತೆ ಇದೆ ಎಂದು ಈ ಎಲ್ಲಾ ಅಂಶಗಳನ್ನು ತಮ್ಮ ವಿಮರ್ಶೆಯಲ್ಲಿ ಪ್ರಸ್ಥಾಪಿಸಿದ್ದಾರೆ. ಏನೇ ಆದರೂ ವೈದ್ಯಕೀಯ ವಿಚಾರಗಳನ್ನು ಜನರಿಗೆ

---

೧. ಜಿ.ಎಸ್.ಭಟ್ಟ, ಆಧುನಿಕ ಬರಹಗಾರರು, ಪು. ೪೫.

ನಿಡುವಲ್ಲಿಯೂ ಅದನ್ನು ಜನಪ್ರಿಯಗೊಳಿಸುವಲ್ಲಿಯೂ ಅನುಪಮಾ ಅವರ ಸಾಹಸ, ತ್ಯಾಗ, ಅಮೋಘವಾದುದು, ಬರಹವೇ ಅಲ್ಲದೆ ಮಾಧ್ಯಮಗಳಾದ ಟಿವಿ, ರೇಡಿಯೋ ಪತ್ರಿಕೆಗಳ ಮೂಲಕ ಅನೇಕ ಸಲಹೆಗಳನ್ನು ನೀಡಿದ್ದಾರೆ. ಇವರು ವೈದ್ಯಕೀಯ ಸಲಹೆಗಾರರೂ, ಮಾರ್ಗದರ್ಶಕರೂ ಆಗಿದ್ದರೂ ಅಲ್ಲದೆ ವೈದ್ಯಕೀಯ ಸಾಹಿತ್ಯ ರಚಿಸುವವರಿಗೆ ನಿದರ್ಶನವಾಗಿಯೂ ಇದ್ದಾರೆ.

# ಅಧ್ಯಾಯ – ೬

## ಅನುಪಮಾ ಅವರ ಕಥೆಗಳಲ್ಲಿ ಸ್ತ್ರೀ ಸಂವೇದನೆ

'ಸಂವೇದನೆ' ಎಂಬುದು ಒಂದೊಂದು ಕಾಲದಲ್ಲಿ ಒಂದೊಂದು ಪ್ರಧಾನವಾದ ರೂಪವನ್ನು ಪ್ರಕಟಿಸುವ ಪ್ರಕ್ರಿಯೆ. ಬದಲಾಗುತ್ತಿರುವ ಬದುಕಿಗನುಗುಣವಾಗಿ ಸಂವೇದನೆಯ ಸ್ವರೂಪವೂ ಭಿನ್ನ ಭಿನ್ನವಾಗಿರುತ್ತದೆ. ಅದರ ಛಾಯೆ ಬರಹ ರೂಪದಲ್ಲೂ ವೈವಿಧ್ಯಮಯವಾಗಿ ದಾಖಲಾಗುತ್ತದೆ. ಕಾಲವೈರುಧ್ಯಗಳ ನಡುವೆ ಸಂವೇದನಾಶೀಲ ಮನುಷ್ಯ ಹೊರಗನ್ನು ಒಳಗೆ ಒಳಗನ್ನು ಹೊರಗೆ ತಂದುಕೊಳ್ಳುವ ಮತ್ತು ತಂದುಕೊಡುವ ತೀವ್ರತೆಯಲ್ಲಿ ಅಭಿವ್ಯಕ್ತಿಸುತ್ತಾನೆ. ಆ ಮೂಲಕ ಅದಕ್ಕೊಂದು ಆಕಾರ ಕೊಡುತ್ತಾನೆ. ಈ ಆಕಾರ ಕವಿತೆಯ ರೂಪದಲ್ಲಿರಬಹುದು. ನಾಟಕವೂ ಆಗಬಹುದು, ಇಲ್ಲವೇ ಚಲನಚಿತ್ರಣ ಆಗಬಹುದು. ಈ ಎಲ್ಲಾ ರೂಪಗಳ ಹಿಂದೆ ಕಾಲ ಮತ್ತು ಮನುಷ್ಯನ ಸಂಬಂಧ ಸ್ವಭಾವ ಮತ್ತು ಸೃಷ್ಟಿ ವಿಧಾನಗಳ ಒತ್ತಡವಿರುತ್ತದೆ. ಹೀಗೆ ಸಂವೇದನೆ ಹಲವಾರು ಮುಖಗಳಲ್ಲಿ ವ್ಯಕ್ತಗೊಳ್ಳುತ್ತಲೇ ಇರುತ್ತದೆ.

ಕನ್ನಡ ಸಾಹಿತ್ಯದ ಆರಂಭದ ಆಧುನಿಕ ಕನ್ನಡ ಸಾಹಿತ್ಯದವರೆಗೂ ಗಮನಿಸಿದಾಗ ಆಧುನಿಕ ಕನ್ನಡ ಸಾಹಿತ್ಯದವರೆಗೂ ಗಮನಿಸಿದಾಗ ಆಧುನಿಕ ಕನ್ನಡ ಸಾಹಿತ್ಯ ಹಲವು ಸಂವೇದನೆಗಳನ್ನು ತನ್ನ ಒಡಲಲ್ಲಿ ಇಟ್ಟುಕೊಂಡು ಬಹಳ ಪ್ರಮುಖವೆನಿಸುತ್ತದೆ. ಈ ಆಧುನಿಕ ಕಾಲಘಟ್ಟದಲ್ಲಿ ಹಲವಾರು ಲೇಖಕಿಯರು ಸಾಹಿತ್ಯವನ್ನು ರಚಿಸಿದ್ದು ಅದರಲ್ಲಿ ಹೆಣ್ಣಿನ ಅನುಭವ ಲೋಕವನ್ನು ತೆರೆದಿಟ್ಟಿದ್ದಾರೆ. ಹಾಗೆಯೇ ಆಧುನಿಕ ಕನ್ನಡ ಸಾಹಿತ್ಯದ ಸಂದರ್ಭದಲ್ಲಿ ಮಹಿಳೆಯರ ಬಗೆಗೆ ಹೆಣ್ಣಿನ ಭಾವನೆಗಳು ನೋವು ನಲಿವುಗಳು ಮನಸ್ಸಿನ ತೊಳಲಾಟಗಳು ಮುಂತಾದ ಅನುಭವಗಳನ್ನು ಚಿತ್ರಿಸಿದ್ದಾರೆ. ಅಂತಹ ಲೇಖಕಿಯರಲ್ಲಿ ಕನ್ನಡದ ಪ್ರಮುಖ ಬರಹಗಾರರಾದ ಡಾ.ಅನುಪಮಾ ನಿರಂಜನ ಅವರು ಬಹಳ ವಿಶಿಷ್ಟ ರೀತಿಯಲ್ಲಿ ಕಾಣಿಸಿಕೊಳ್ಳುತ್ತಾರೆ ಎಂದರೆ ತಪ್ಪಾಗಲಾರದು.

ಅನುಪಮಾ ಅವರು ಸಾಹಿತ್ಯ ಸೃಷ್ಟಿಗೆ ಅಗತ್ಯವಾಗಿ ಶ್ರದ್ಧೆಯನ್ನು ಹೇಳುತ್ತ ಅವರು ತಮ್ಮನ್ನು ಪ್ರಭಾವಿಸಿದ ಹಳ್ಳಿಜೀವನ, ಹಳ್ಳಿಯ ಮಹಿಳೆಯರ ಬದುಕು, ಅವರ ಪರಿಸ್ಥಿತಿಗಳ ಬದ್ಧತೆಯ ಹಿನ್ನೆಲೆಯಲ್ಲಿ ಕತೆಗಳನ್ನು ಬರೆಯಲು ಪ್ರಯತ್ನಿಸಿದರು.

ಆದ್ದರಿಂದ ಸ್ತ್ರೀ ಸಂವೇದನೆಗೊಂದು ವಿಶಿಷ್ಟ ಕೊಡುಗೆ ಅವರ ಕಥೆಗಳಿಂದ ಲಭ್ಯವಾಗುತ್ತದೆ.

ಅನುಪಮಾ ಅವರು ತಮ್ಮ ಆಳವಾದ ವೈಚಾರಿಕ ನೆಲೆಯಿಂದ ಹೆಣ್ಣು ಗಂಡಿನ ಸಂಬಂಧವನ್ನು ತಮ್ಮ ಕಥೆಗಳಲ್ಲಿ ವಿಶ್ಲೇಷಿಸುತ್ತಾರೆ. ಅನುಪಮಾ ಅವರ ವೈಚಾರಿಕತೆ ಮತ್ತು ಚಿಂತನಾಶೀಲತೆ ಹೆಚ್ಚಾಗಿ ಗ್ರಾಮೀಣ ಸಂಸ್ಕೃತಿಯ ಪರವಾಗಿರುವುದರಿಂದ ಗ್ರಾಮೀಣ ಮಹಿಳೆಯರ ನೋವು, ನಲಿವುಗಳು, ಅವರ ಭಾವನೆಗಳು, ಮನಸ್ಸಿನ ಹೊಯ್ದಾಟಗಳನ್ನು ಸಂವೇದನಾಪೂರ್ವಕವಾಗಿ ಚಿತ್ರಿಸುವುದರ ಮೂಲಕ ಅವರ ಬದುಕಿನ ಸ್ಥಿತಿಗತಿಗಳು ಮತ್ತು ಮೌಲ್ಯಗಳನ್ನು ವೈಭವೀಕರಣ ಮಾಡುತ್ತಾರೆ. ಅನುಪಮಾ ಅವರ ಕಥೆಗಳಲ್ಲಿನ ಸ್ತ್ರೀ ಸಂವೇದನೆಯ ಸಾಹಿತ್ಯಿಕ ಕಾಲಘಟ್ಟದ ದೃಷ್ಟಿಯಿಂದ ಮತ್ತು ಕಥೆಗಳ ದೃಷ್ಟಿಯಿಂದ ಪರಿವರ್ತನೆ ಕಂಡುಬರುತ್ತದೆ. ಅನುಪಮಾ ಅವರು ತಮ್ಮ ಕಥೆಗಳಲ್ಲಿ ಗ್ರಾಮೀಣ ಮಹಿಳೆಯರ, ಭಾರತೀಯ ಸಾಂಪ್ರದಾಯಿಕ ಮಹಿಳೆಯರ ಪಾತ್ರ ಚಿತ್ರಣವನ್ನು ಮಾಡುವುದರ ಜೊತೆಗೆ ಬದಲಾಗುತ್ತಿರುವ ಪರಿಸ್ಥಿತಿಗಳಗನುಗುಣವಾಗಿ ಪುರುಷ ಕೇಂದ್ರಿತ ವ್ಯವಸ್ಥೆಯ ವಿರುದ್ಧ ಪ್ರತಿಭಟನೆಯನ್ನು ತೋರುವ ಪಾತ್ರಗಳನ್ನು ಸೃಷ್ಟಿಸುತ್ತಾರೆ. ಅನುಪಮಾ ಅವರ ಕಥೆಗಳಲ್ಲಿ ಅಭಿವ್ಯಕ್ತವಾಗಿರುವ ಸ್ತ್ರೀ ಸಂವೇದನೆಯನ್ನು ನಾವು ಈ ಮುಂದಿನಂತೆ ಹಂತಹಂತವಾಗಿ ನೋಡಬಹುದಾಗಿದೆ. 'ರೂವಾರಿಯ ಲಕ್ಷ್ಮಿ' ಕಥೆಯಲ್ಲಿ ಒಟ್ಟು ಹತ್ತು ಕಥೆಗಳಿವೆ. ಅದರಲ್ಲಿ ಸ್ತ್ರೀ ಸಂವೇದನೆಗೆ ಸಂಬಂಧಿಸಿದ ಕೆಲವು ಕಥೆಗಳನ್ನು ಆಯ್ದುಕೊಂಡು ಮುಂದಿನ ಭಾಗದಲ್ಲಿ ವಿವರಿಸಲಾಗುತ್ತದೆ. ಅದೇ ರೀತಿಯಲ್ಲಿ ಒಂದು ಗಿಣಿಯ ಕಥೆ, ಒಡಲು, ನೀರಿಗೆ ನೈದಿಲೆ ಶೃಂಗಾರ, ಪುಷ್ಪಕ, ಕತ್ತಲು ಇನ್ನು ಮುಂತಾದವು ಅನುಪಮಾ ಅವರು ವಿವರಿಸಿದ್ದಾರೆ.

**ಒಂದು ಗಿಣಿಯ ಕಥೆ:** ಒಂದು ಘಟನೆ ಮತ್ತು ಅನಂತರ ಈ ಎರಡು ಕಥೆಗಳಲ್ಲಿಯೂ ಅನುಪಮಾ ಅತ್ಯಾಚಾರವನ್ನು ವಸ್ತುವಾಗಿಸಿದ್ದಾರೆ. ಗಿಣಿಯ ಹೋಲಿಕೆ ಇಲ್ಲಿನ ನಾಯಕಿ ಗೀತಾಳಿಗಿದೆ. ಗಿಣಿ ಎಂದರೆ ಪಂಜರದಲ್ಲಿಯ ಹಕ್ಕಿ, ಅಂದರೆ ಒಂದು ಹೆಣ್ಣಿನ ಗೋಳಿನ ಕಥೆಗೆ ಸಂಬಂಧಿಸಿದೆ, ಇದು ಸ್ವಾತಂತ್ರ್ಯವಿಲ್ಲದ ಬದುಕು ಗೋಳಿನದು. ಅಲ್ಲಿ ಪುರುಷ ಕೇಂದ್ರಿತವಾದ ಮಾವನ ಆಜ್ಞೆಯಂತೆ ನಡೆಯಬೇಕು, ಬಡತನದಿಂದಲೇ ಬಂದ ಗೀತಳ ಮಾವನಿಂದಲೇ ಅತ್ಯಾಚಾರಕ್ಕೆ ಒಳಗಾಗುತ್ತಾಳೆ. ಇದರಿಂದ ನೊಂದು ಪತ್ರ ಬರೆದು ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ಇದರಿಂದ ನೊಂದು ಪತ್ರ ಬರೆದು ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ಗಂಡನಿಗೆ ಈ ಪತ್ರ ಸಿಕ್ಕಿ ಅಲ್ಲಿ ನಡೆದ ವಿಷಯವನ್ನೆಲ್ಲಾ

ತಿಳಿದು ಅಪ್ಪನನ್ನು ಧಿಕ್ಕರಿಸಿ ಗಂಡ ಹೊರಗೆ ಹೋಗುತ್ತಾನೆ. ಇಲ್ಲಿ ನಾಯಕಿಯ ಮೇಲೆ ನಡೆದ ದೌರ್ಜನ್ಯ. ಅವಳ ಸ್ವಾತಂತ್ರ್ಯದ ಬದುಕು ಮುಖ್ಯವಾಗಿವೆ. ಅನುಪಮಾ ಅವರ ಕಥೆಯ ಸಾರಾಂಶವೆಂದರೆ ಮಹಿಳೆಯರಲ್ಲಿ ಬಡವರಾದವರು ಹಾಗೂ ಬಡತನದಲ್ಲಿಯೂ ಹೆಚ್ಚು ಮಹಿಳೆಯರು ಶೋಷಣೆಗೆ ಒಳಗಾಗುತ್ತಾರೆ. ಆ ಕಾಲದ ಸಾಮಾಜಿಕ ವ್ಯವಸ್ಥೆಗನುಗುಣವಾಗಿ ಇಂತಹ ವಿಷವರ್ತುಲದಿಂದ ಹೊರಬರಲು ಸಾವು/ಆತ್ಮಹತ್ಯೆಯ ಪರಿಹಾರವೆಂಬಂತೆ ಸೂಚಿಸಿದ್ದಾರೆ.

'ಕಪ್ಪು-ಬಿಳುಪು' ಕಥೆಯಲ್ಲೂ ಕೆಳವರ್ಗದ ಗಂಡಸು ಸಾಮಾಜಿಕ ನೆಲೆಯ ಬಗ್ಗೆ ಮಾರ್ಮಿಕವಾಗಿ ಕಥೆಯ ಮುಖೇನ ಚರ್ಚಿಸಲು ಬಯಸುತ್ತಾರೆ. ಒಂದು ಘಟನೆ ಮತ್ತು ಗಂಡು -ಹೆಣ್ಣಿನ ದೃಷ್ಟಿಕೋನಗಳನ್ನು ಸೆರೆಹಿಡಿದಿದ್ದಾರೆ. ಒಂದು ಘಟನೆ ಸಂಬವಿಸುತ್ತದೆ. ಆದರೆ ಅದರ ಅನಂತರದಲ್ಲಿ ಉಂಟಾಗುವ ತೊಂದರೆಗಳು ಎಂಥವು? ಎಂಬುದು ವಾಸ್ತವವಾದ ಸಮಸ್ಯೆಯಾಗುತ್ತದೆ. ಗೂಂಡಾಗಳಿಂದ ಅತ್ಯಾಚಾರಕ್ಕೆ ಒಳಗಾದ ಹೆಂಡತಿಯನ್ನು ರಕ್ಷಿಸಲಾಗದ ಗಂಡ ಮೂರನೆಯ ದಿನ ಹೆಂಡತಿಯನ್ನು ಹಲವು ಹೊಯ್ದಾಟಗಳ ನಡುವೆ ಕರೆದು ತರುತ್ತಾನೆ. ಹೆಂಡತಿಯ ಪ್ರಶ್ನೆಗೆ ನಿಷ್ಟುರವಾಗಿ 'ಮಾಡೋದಿಕ್ಕೆ ಇನ್ನೇನುಳಿದಿದೆ?' ಎಂಬ ಪ್ರಶ್ನೆ ಅವಳನ್ನು ಬಹಳವಾಗಿ ನೋಯುವಂತೆ ಮಾಡುತ್ತದೆ. ಈ ನಿರ್ದಯತ್ವ ಅಮಾನವವೀಯತೆಗೆ ಜುಗುಪ್ಸೆಗೊಂಡ ಈ ಹೆಂಡತಿಗೆ ತಾಳಿಯನ್ನು ಮನೆಯಲ್ಲೇ ಬಿಟ್ಟು ಹೊರ ಹೋಗುತ್ತಾಳೆ. ಅಂದರೆ ಇಲ್ಲಿ ಪ್ರಗತಿಶೀಲ ಮನೋಭಾವವನ್ನು ಕಾಣಬಹುದಾಗಿದ್ದು ಮಹಿಳೆ ತನ್ನ ಸ್ವಾಭಿಮಾನಕ್ಕೆ ಧಕ್ಕೆಯಾದರು. ತನ್ನನ್ನು ಅಲ್ಲಗಳೆಯಬಹುದಾದರೂ ಯಾವುದೇ ಸಮಾಜದೊಂದಿಗೂ ಅವಳು ಸಂಪರ್ಕವಿರಿಸಿಕೊಳ್ಳದೇ ಧಿಕ್ಕರಿಸಿ ನಡೆಯುವಳು ಎಂಬುದು ತೋರಿಸಿದೆ. ಆದರೆ ತನಗಾದ ಅನ್ಯಾಯಕ್ಕೆ ಪ್ರಶ್ನಿಸುವ ಪ್ರತಿಭಟಿಸುವ ಯಾವ ಕ್ರಿಯೆಯೂ ಇಲ್ಲ. ಮನೆಯಿಂದ ಹೊರಹೋದದ್ದೆ ಪರಿಹಾರ ಅಲ್ಲವೆ? ಅಂದರೆ ಗಂಡನಿಂದಲೇ ಹೀನವಾದ ಮಾತುಗಳನ್ನು ಕೇಳಿದ ಹೆಂಡತಿಗೆ ತುಂಬಾ ತಡೆಯಲಾರದ ನೋವು ಯಾತನೆಯುಂಟಾಗಿ ಅವಳು ಅವನಿಂದ ದೂರವಾಗಲು ನಿಶ್ಚಯಿಸುತ್ತಾಳೆ. ಆಕೆಗೆ ಸಾಂತ್ವನದ ಮಾತುಗಳನ್ನು ಹೇಳದೆ ನೊಂದಿರುವ ಪತ್ನಿಗೆ ಗಾಯದ ಮೇಲೆ ಬರೆ ಎಳೆದಂತೆ ಮಾತಾಡಿದ ಪತಿಗೆ ಸರಿಯಾದ ಪಾಠವನ್ನು ಕಲಿಸುವುದೇ ಆಗಿದೆ. ಅನುಪಮಾ ಅವರು ಇಲ್ಲಿ ಈ ಎಲ್ಲಾ ಸಮಸ್ಯೆ ಮತ್ತು ಒತ್ತಡಗಳನ್ನು ಮೀರಿ ಎಲ್ಲರೂ ಕೇವಲ ಹೆಣ್ಣು ಗಂಡುಗಳಾಗಿ ಮಾತ್ರ

ಬದುಕಬಹುದಾದ ಒಂದು ಸಾಮಾಜಿಕ ಪರಿಸರ ಸಿದ್ಧವಾಗಬೇಕು ಎಂದು ಹೇಳಲು ಬಯಸುತ್ತಾರೆ.

'ಮಗು' ಕಥೆಯಲ್ಲಿ ಹೆಣ್ಣಿನ ಬುದ್ಧಿಯ ಜೊತೆಗೆ ಅವಳ ಮಹತ್ವಾಕಾಂಕ್ಷೆಗೆ ಪ್ರಾಧಾನ್ಯತೆ ಕೊಟ್ಟಂತಹ ಕಥೆಗಳೂ ಇವೆ. ಈ ಕಥೆಯಲ್ಲಿ ನಾಯಕಿಯಾದವಳು ಓದಿನಲ್ಲಿ, ವಿದ್ವತ್ತಿನಲ್ಲಿ ಅಪಾರವಾದ ಬಯಕೆಗಳನ್ನಿಟ್ಟುಕೊಂಡಿರುವವಳು, ಆದರೆ ಈಕೆಗೆ ಕುಟುಂಬದಲ್ಲಿ ಒತ್ತಡ, ಅದರ ಜೊತೆಗೆ ಮಗುವಿನ ಜವಾಬ್ದಾರಿಗಳು ಅವಳನ್ನು ಕಟ್ಟಿಹಾಕಿರುತ್ತದೆ. ಆದರೆ ಅವಳ ಮಹತ್ವಾಕಾಂಕ್ಷೆಯ ಫಲ ಮಗುವಿನ ಸಾವು, 'ಮಗು' ಕಥೆಯಲ್ಲಿ ಆಯ್ದುಕೊಂಡಿರುವ ವಸ್ತುವಾಗಿದೆ. 'ಒಡಲು' ಕಥೆಯಲ್ಲಿಯೂ ಕೂಡ ತಾಯ್ತನದ ತ್ಯಾಗ ಮತ್ತು ಒಲವನ್ನು ಸರಿಸಿದ್ದಾರೆ. ಶ್ರೀಮಂತ ಮತ್ತು ಬಡತನ ಈ ವರ್ಗಗಳಿಂದ ಬಂದಿರುವ ತಾಯಂದಿರು ಒಂದು ಮಗುವಿನ ಪ್ರೀತಿಯಲ್ಲಿ ಸೆಳೆತಕ್ಕೆ ಒಳಗಾಗುವುದನ್ನು ನವಿಲ್ಲಿ ಕಾಣಬಹುದಾಗಿದೆ. 'ಅನುಪಮಾ ಅವರ ಸಾಹಿತ್ಯದಲ್ಲಿ ಸೂಕ್ಷ್ಮ, ಸ್ಥೂಲವಾದದ್ದಾಗಲೀ ಜಾತಿ-ವರ್ಗ ಎಂಬುದನ್ನು ಕಾಣಬಹುದಾಗಿದೆ.

'ಮೌನ' ಕಥೆಯಲ್ಲಿ ಕಾವೇರಿಯು ಕಥಾ ನಾಯಕಿ. ಈಕೆಗೆ ಇನ್ನೇನು ಸಾವು ಬರುತಿದೆ ಎಂಬುದನ್ನು ತಿಳಿದ ಇವರ ಕುಟುಂಬದವರು ಇವಳ ಗಂಡ, ಮಕ್ಕಳು, ಎಲ್ಲರೂ ಇವಳ ಸಾವನ್ನೇ ತಮ್ಮ ಸ್ವಾರ್ಥಕ್ಕಾಗಿ ಎದುರು ನೋಡುತ್ತಿರುತ್ತಾರೆ. ಇದರಿಂದಾಗಿ ಇವಳ ಕುಟುಂಬದೊಂದಿಗಿನ ಸಂಬಂಧವೂ ಬಿಗಡಾಯಿಸಿ-ಕೊಳ್ಳತೊಡಗುತ್ತದೆ. ಇದಕ್ಕೆ ಪ್ರತಿಯಾಗಿ ಸಿದ್ದವ್ವ ಇವಳನ್ನು ಪ್ರೀತಿಯಿಂದ ಆರೈಕೆ ಮಾಡುತ್ತಾಳೆ. ಇದೇ ಸಿದ್ದವ್ವನಿಗಿದ್ದ ಕಾವೇರಕ್ಕನ ಬಗೆಗಿನ ಪ್ರೀತಿ, ವಾತ್ಸಲ್ಯಗಳು ಭಾವನಾತ್ಮಕವಾಗಿದೆ. ಆದರೆ ಕುಟುಂಬದಲ್ಲಿ ಇವಳ ಸಾವು ವ್ಯಾವಹಾರಿಕ ಸಂಬಂಧದ ಕುರುಹಾಗಿ ಕಾಣುತ್ತದೆ. ಇಲ್ಲಿ ಹೆಣ್ಣೊಬ್ಬಳ ಸಂವೇದನೆಗಳಿಗೆ ಸ್ಪಂದಿಸದ ಕುಟುಂಬದವರು ಸ್ವೇಚ್ಛೆಯಾಗಿ ವರ್ತಿಸುವುದು ಇಲ್ಲಿ ಕಾಣುತ್ತದೆ. ಅವಳು ಕುಟುಂಬದವರಿಗಾಗಿ ಸಲ್ಲಿಸಿದ ಸೇವೆ, ತ್ಯಾಗ ಇವುಗಳನ್ನು ಲೆಕ್ಕಿಸಿದೆ. ಅವಳ ಸಾವನ್ನು ಬಯಸುವ ಇವರ ವರ್ತನೆ ಅಮಾನವೀಯವಾದುದಾಗಿದೆ ಎಂದು ಅನುಪಮಾ ಅವರು ಈ ಕಥೆಯಲ್ಲಿ ತಿಳಿಸಿದ್ದಾರೆ.

'ಸೊನ್ನೆ', 'ಛಲ', 'ಅಂಬಿಗ'. ಈ ಕಥೆಗಳಲ್ಲಿ ಅನುಪಮಾ ಅವರು ವರ್ತಮಾನದ ಹಿನ್ನಲೆಯಲ್ಲಿ ಮತ್ತು ವಾಸ್ತವತೆಯ ಹಿನ್ನಲೆಯಲ್ಲಿ ಹೆಣ್ಣಿನ ಸಂವೇದನೆಯ ವಿಚಾರಗಳನ್ನು ಪ್ರಯತ್ನಿಸುತ್ತಾರೆ. ಅಂದರೆ ಸಂಬಂಧದ ಟೊಳ್ಳುತನಗಳು ಮುರಿದು ಬೀಳುವುದನ್ನು ಮದುವೆಯ ಮೂಲಕ ಅನುಪಮಾ ಅವರು

ತಮ್ಮ ಕಥೆಯ ಮೂಲಕ ತೋರಿಸಿದ್ದಾರೆ, ಅಂದರೆ ನಿಶ್ಚಯವಾಗಿದ್ದ ಮದುವೆ ಅಥವಾ ಪರಸ್ಪರ ಪ್ರೇಮಿಸಿರುವ ಜೋಡಿಗಳ ಮದುವೆಗಳು ಯಾವುದೋ ಕಾರಣಕ್ಕೆ ಕೊರತೆಗೆ ಒಳಗಾಗಿ ಮುರಿದು ಬೀಳುವ ಸಂದರ್ಭಗಳನ್ನು ಈ ಕಥೆಗಳಲ್ಲಿ ತೆರೆದಿಟ್ಟಿದ್ದಾರೆ. ಕೇವಲ ಕ್ಷುಲ್ಲಕ ವಿಷಯಗಳು ಇಲ್ಲಿ ಕೆಲಸ ಮಾಡುತ್ತವೆ. ಇದಕ್ಕೆ ಅಪವಾದವೆಂಬಂತೆ ಕ್ಯಾನ್ಸರ್ ರೋಗಕ್ಕೆ ಗುರಿಯಾದ ಹುಡುಗಿಗೆ ಮದುವೆಯಾಗುವಂತಹ ಆಶ್ಚರ್ಯದ ಅಪರೂಪದ ವ್ಯಕ್ತಿಯ ಚಿತ್ರಣಗಳುಳ್ಳ ಕಥೆಗಳು ಇವು. ಇದರಲ್ಲಿ ವರದಕ್ಷಿಣೆಯ ಭೂತ ಹೆಣ್ಣು ಹಡೆದುದನ್ನು ಕಾಡುವ ಸಮಸ್ಯೆಯಾಗಿದೆ. ಮದುವೆಯಾಗುವಂತಹ ಹುಡುಗಿಗೆ ಖಾಯಿಲೆ ಇದೆ ಎಂದು ಕೈ ಕೊಡುವ, ಕೈಬಿಡುವ ಹಲವಾರು ಗಂಡುಗಳು ಈ ಜಗತ್ತಿನಲ್ಲಿ ಸಾಕಷ್ಟು ಇದ್ದಾರೆ. ಅದೇ ರೀತಿಯಲ್ಲಿ ಗಂಡಸು ನಿರ್ದಯವಾಗಿ ಕನಸುಗಳನ್ನು ಒಡೆಯುತ್ತಾನೆ. ಹೆಂಗಸು ಆ ಸಂದರ್ಭದಲ್ಲಿ ನಿರಾಶಳಾಗುತ್ತಾಳೆ. ಕೆಲವೊಮ್ಮೆ ಈ ನಿರಾಶೆಯಿಂದ ಮೇಲೇರಿ ವಿದ್ಯೆಯಲ್ಲೋ, ಕೆಲಸದಲ್ಲೋ ಹೊಸದಾದ ಜೀವನವನ್ನು ಕಂಡುಕೊಳ್ಳುತ್ತಾಳೆ ಅಥವಾ ಮತ್ತೊಬ್ಬ ಸಹೃದಯಿ ಆಕೆಯ ಕೈಹಿಡಿಯಲೂಬಹುದಾಗಿದೆ. ಈ ಕಥೆಯಲ್ಲಿ ಪುರುಷ ಹೆಣ್ಣನ್ನು ತನಗೆ ಬೇಕೆಂದ ಹಾಗೆ ನಡೆಸಿಕೊಳ್ಳುವ ಪದ್ಧತಿ ಇದೆ. ಇಲ್ಲಿ ಹೆಣ್ಣಿನ ಭಾವನೆಗಳಿಗೆ ಬೆಲೆಯೇ ಇಲ್ಲ ಎಂಬುದು ಕಂಡುಬರುತ್ತದೆ.

ಅನುಪಮಾ ಅವರ ಮತ್ತೊಂದು ಬಹುಮುಖ್ಯವಾದ ಕಥೆ 'ರೂವಾರಿಯ ಲಕ್ಷ್ಮಿ' ಇದರಲ್ಲಿ ಒಂದು ಕಾಲದ ಸಾಮಾಜಿಕತೆಯ ದುರಂತವೂ ಹೇಗೆ ಅಡಗಿದೆ ಎಂಬುದನ್ನು ಚಿತ್ರಿಸುತ್ತದೆ. ಸಾಮಾಜಿಕ ಸಂದರ್ಭದಲ್ಲಿ ದುರಂತವೂ ಹೇಗೆ ಅಡಗಿದೆ ಎಂಬುದನ್ನು ಚಿತ್ರಿಸುತ್ತದೆ. ಸಾಮಾಜಿಕ ಸಂದರ್ಭದಲ್ಲಿ ಅಂಧಮೌಢ್ಯಗಳ ವ್ಯವಸ್ಥೆಗೆ ಮುಗ್ಧ ಅಮಾಯಕ ಹೆಣ್ಣೊಬ್ಬಳು ತನ್ನ ಜೀವವನ್ನೇ ತೆರಬೇಕಾಗುತ್ತದೆ. ಗ್ರಾಮೀಣ ಪ್ರದೇಶದಲ್ಲಿ ಹಲವಾರು ಮೌಢ್ಯ ನಂಬಿಕೆಗಳಿಗಾಗಿ ಹೆಣ್ಣಿನ ಜೀವಿಸುವ ಹಕ್ಕನ್ನೆ ಕಸಿದುಕೊಳ್ಳುವ ಸಮಾಜದ ವಿಕೃತ ಮನಸ್ಸು ಈ ಕಥೆಯಲ್ಲಿ ಕಂಡುಬರುತ್ತದೆ. ಈ ಕಥೆಯಲ್ಲಿ ವರುಣಾಚಾರಿ ಎಂಬ ಶಿಲ್ಪಿಯು ಜಕಣಾಚಾರ್ಯರ ಆದೇಶದ ಮೇರೆಗೆ ಲಕ್ಷ್ಮಿ ವಿಗ್ರಹವನ್ನು ಕೆತ್ತುವುದಕ್ಕೆ ಸಮ್ಮತಿಯನ್ನು ಪಡೆದಿರುತ್ತಾರೆ. ಆ ವಿಗ್ರಹವು ವರುಣಾಚಾರಿಯ ಹೆಂಡತಿ ಮಾದೇವಿಯನ್ನೇ ಹೋಲುವಂತೆ ಇರುತ್ತದೆ. ಇವರಿಬ್ಬರೂ ಪರಸ್ಪರ ಅನ್ಯೋನ್ಯವಾಗಿ ಜೀವನವನ್ನು ನಡೆಸುತ್ತಿರುತ್ತಾರೆ. ಆದರೆ ಒಂದು ದಿನ ಮಾದೇವಿ ತನ್ನ ಗಂಡ ಕೆತ್ತಿರುವ ವಿಗ್ರಹವನ್ನು ನೋಡುತ್ತಿರುವಾಗಲೇ ಮಾದೇವಿ ಅವ್ವಯ್ಯಾ! ಎಂದು ಉದ್ಗಾರ ತೆಗೆದಳು.' ತನ್ನ ಪ್ರತಿರೂಪವೆಂಬಂತಿದ್ದ ಲಕ್ಷ್ಮಿ

ವಿಗ್ರಹವನ್ನು ನೋಡಿ ಅವಳಿಗೆ ಸಂತೋಷದ ಜೊತೆಗೆ ಗಾಬರಿಯೂ ಆಯಿತು. ಈ ಪ್ರತಿಮೆ ಅಪ್ರತಿಮವಾಗಿತ್ತು. ಈ ಪ್ರತಿಮೆಯನ್ನು ನೋಡಿ ಇಬ್ಬರೂ ಸಂತೋಷದಲ್ಲಿ ತೊಡಗಿರುವಾಗ "ದೂರದಲ್ಲಿ ಕೆಂಧೂಳು ಎದ್ದಿತು, ಖರಪುಟಗಳ ಶಬ್ದ, ಯಾರು ಬಂದರು?" ಎಂದು ತಮ್ಮ ಕಣ್ಣುಗಳನ್ನು ಒರಸಿಕೊಳ್ಳುವಷ್ಟರಲ್ಲಿ ದಳವಾಯಿ ಬೊಮ್ಮಣ್ಣ ಕಣ್ಣಿಗೆ ಕಾಣಿಸಿಕೊಳ್ಳುತ್ತಾನೆ. ಇವನನ್ನು ನೋಡಿದ ಮಾದೇವಿ ಮರದ ಪೊದೆಯಲ್ಲಿ ಅವಿತುಕೊಳ್ಳುತ್ತಾಳೆ. ಅನಂತರ ವರುಣಾಚಾರಿ, ಬೊಮ್ಮಣ್ಣ ಇವರ ನಡುವೆ ನಡೆಯುವುದು ಏನೆಂದರೆ ವರುಣಾಚಾರಿಯು ಸೃಷ್ಟಿಸಿದ ಶಿಲ್ಪಸೃಷ್ಟಿಯನ್ನು ನೋಡಿದ ಬಲು ಮೋಹಕವಾಗಿತ್ತು ಮುಖ. ಆ ಮುಖ ಯಾವುದು ಎಂದು ಇದು ಈತನ ಹೆಂಡತಿಯದೇ ಇರಬಹುದು ಎಂದು ಇದೇನು ವಿಗ್ರಹ? ಎಂದು ಬೊಮ್ಮಣ್ಣ ಆಕ್ರೋಶಿಸಿದ. ಇದಕ್ಕೆ ಉತ್ತರವಾಗಿ ಲಕ್ಷ್ಮಿ ವಿಗ್ರಹ ಪ್ರಭುಗಳೇ ಎಂದು ವರುಣಾಚಾರಿ ಹೇಳಿದಾಗ 'ಅದೋ ನೋಡು ಆ ಮದನಿಕೆ ನೋಡು. . . ." ಎನ್ನುತ್ತಾನೆ. ದಳವಾಯಿ ಬೊಮ್ಮಣ್ಣ ಅದಕ್ಕೆ ಉತ್ತರವಾಗಿ "ಮಹಾಲಕ್ಷ್ಮಿ ಅಂತಃಪುರದ ನರ್ತಕಿ ಆಗೋಕೆ ಸಾಧ್ಯನಾ, ಪ್ರಭೂ?" ಎನ್ನುತ್ತಾನೆ "ಇದಿರಾಡ್ತಾಯು, ನಾಯಿ?" ಎಂದು ವರುಣಾಚಾರಿಯನ್ನು ಮನಬಂದಂತೆ ಥಳಿಸುತ್ತಾನೆ. ಇದನ್ನು ತಡೆಯಲು ಮಾದೇವಿ ಓಡಿ ಬಂದು ತಡೆಯುತ್ತಾಳೆ. ಇದು ಮುಗಿದ ಮೇಲೆ ರಾತ್ರಿಯಾಯಿತು ಮನೆಯಲ್ಲಿ ಮಾದೇವಿ ನಾವು ಈ ಊರನ್ನೇ ಬಿಟ್ಟು ಹೊರಟುಹೋಗುವ ಎಂದು ಮಾತಾಡಿಕೊಂಡು ಮಲಗುತ್ತಾರೆ. ಮಧ್ಯರಾತ್ರಿಯಲ್ಲಿ ಬಾಗಿಲು ತಟ್ಟಿದ ಶಬ್ದಕೇಳಿ ವರುಣಾಚಾರಿಯು ಬಾಗಿಲು ತೆಗೆದಾಗ ದಳವಾಯಿ ಕಳುಹಿಸಿದ ಆರು ಜನ ಸಿಪಾಯಿಗಳು ವರುಣಾಚಾರಿಗೆ ತಲೆಗೆ ಬಲವಾದ ಪೆಟ್ಟು ಹೊಡೆದು ಮಾದೇವಿಯನ್ನು ಎಳೆದುಕೊಂಡು ಹೋಗುತ್ತಾರೆ. ಅಂದರೆ ಅಧಿಕಾರಿಯ ದರ್ಪ, ಬಡವರ ಸ್ಥಿತಿಯನ್ನು ಹೇಗೆ ದಾಳವನ್ನಾಗಿ ಬಳಸಿಕೊಂಡು ತಮ್ಮ ಕೆಟ್ಟ ಆಸೆಗಳನ್ನು ಈಡೇರಿಸಿಕೊಳ್ಳುತ್ತಾರೆ. ಇಂತಹ ಸ್ಥಿತಿಯಲ್ಲಿ ತನ್ನ ಮಾದೇವಿಗಾಗಿ ಬೆಳಗಾದ ಮೇಲೆ ಜ್ಞಾಪಿಸಿಕೊಂಡು ನನ್ನ ಮಾದೇವಿ ಕೊಡ್ರೋ ಎಂದು ದಳವಾಯಿಯ ಅರಮನೆಯ ಮುಂದೆ ಗೋಳಿಡುವಾಗ ಅಲ್ಲಿನ ಸಿಪಾಯಿಗಳು ನಿನ್ನ ಮಾದೇವಿ ರಾತ್ರಿಯಲ್ಲೆ ಮುಗಿಸಿ ಬಿಟ್ರು 'ತಲೆ ಕೆಟ್ಟೈತೇನೋ ನಿಂಗೆ?'

ಸೈನಿಕರನ್ನು ಕುರಿತು ಆಜ್ಞೆ ಬಂತು:

"ಅವನನ್ನು ಹಿಡಕೊಂಡ್ಹೋಗಿ!"

ಎಲ್ಲಿಗೆಂದು ತಿಳಿದಿತ್ತು ದಳವಾಯಿಯ ಆ ಬಂಟರಿಗೆ ಅಂದರೆ "ಬರಿದಾದ ವರುಣಾಚಾರಿಯ ಜಾಗವನ್ನು ನೋಡುತ್ತಾ ಸೋಮಣ್ಣ ನಿಟ್ಟುಸಿರುಬಿಟ್ಟ, ಯಾರೋ ಒಡೆದುಹಾಕಿದ್ದ ಲಕ್ಷ್ಮಿ ವಿಗ್ರಹ ಬೋರಲಾಗಿ ಬಿದ್ದು ಅಳುತ್ತಿದ್ದಂತೆ ಅವನಿಗೆ ಭಾಸವಾಯಿತು".

ಗಂಡನ ಅಸಹಾಯಕತೆ, ಹೆಣ್ಣಿನ ಅಬಲತೆಯನ್ನು ತನ್ನ ಅಧಿಕಾರದ ಬಲದಿಂದ ಅದೆಷ್ಟೋ ಹೆಣ್ಣುಗಳ ಮೇಲೆ ಅತ್ಯಾಚಾರವೆಸಗಿದ್ದಾರೆ ಎಂಬುದು ಇಲ್ಲಿ ವ್ಯಕ್ತವಾಗುತ್ತಿದೆ. ಮಾದೇವಿಯ ಸೌಂದರ್ಯವನ್ನು ಇದುವರೆವಿಗೂ ಈಕೆ ನನ್ನ ಕಣ್ಣಿಗೆ ಬಿದ್ದಿರಲಿಲ್ಲ. ಇವಳನ್ನು ಅನುಭವಿಸಲೇಬೇಕು ಎಂದು ತೀರ್ಮಾನಿಸಿ ನಡುರಾತ್ರಿಯಲ್ಲಿ ಈ ಕೆಲಸವನ್ನು ತನ್ನ ಸಿಪಾಯಿಗಳ ಮೂಲಕ ಮಾಡಿಸಿದಂತಹ ಹೇಯಕರವಾದುದು ಎಂಬುದು ಅನುಪಮಾ ಅವರ ರೂವಾರಿಯ ಲಕ್ಷ್ಮಿ ಎಂಬ ಕಥೆಯಲ್ಲಿ ಧ್ವನಿತವಾಗಿದೆ.

'ವಿಳಾಸವಿಲ್ಲದ ಮಗು' ಎಂಬ ಕಥೆಯಲ್ಲಿ ಅನುಪಮಾರವರು ಒಡಲು ಹೇಗೆ ಕಾರ್ಯ ನಿರ್ವಹಿಸುತ್ತದೆ ಎನ್ನುವುದನ್ನು ಇಲ್ಲಿ ತಿಳಿಸಿದ್ದಾರೆ. ಒಂದು ಹೆಣ್ಣು ಸುಂದರಮ್ಮ ಒಬ್ಬ ನರ್ಸ್ ಆದರೆ ಅವಳಿಗೆ ಮದುವೆ ಬೇಡ, ಮಕ್ಕಳಂತೂ ಬೇಡವೇ ಬೇಡ ಎಂದು ಯಾವಾಗಲೂ ಕೋಪಿಷ್ಟೆ ಅವಳ ಮನಸ್ಸನ್ನು ವಿಳಾಸವಿಲ್ಲದ ಮಗು ಅವಳ ಒಡಲು ಹೇಗೆ ತುಂಬಿಕೊಳ್ಳುವಂತೆ ಮಾಡುತ್ತದೆ ಎಂಬುದೇ ಈ ಕಥೆಯ ಸ್ವಾರಸ್ಯ, ಸುಂದರಮ್ಮನ ನೌಕರಿಯ ದಿನ ಹೆರಿಗೆಗೆಂದು ಒಬ್ಬ ಹೆಂಗಸು ಬಂದಿರುತ್ತಾಳೆ. ಆದರೆ ಆಕೆ ಒಂದು ಹೆಣ್ಣು ಮಗುವಿಗೆ ಜನ್ಮ ನೀಡಿ ಸತ್ತು ಹೋಗುತ್ತಾಳೆ. ಶಾರದ ಎಂಬುವ ನರ್ಸ್‌ನ್ನು ಆಕೆಯ ಅಡ್ರಸ್ ತರುವಂತೆ ಸುಂದರಮ್ಮ ನರ್ಸ್ ಕೇಳಿದಾಗ ಇಲ್ಲ ಮೇಡಂ ಎಂದಾಗ ಅದಕ್ಕೆ ಪ್ರತಿಯಾಗಿ ಶಾರದ ಎಂಬುವ ನರ್ಸ್ "ಅಯ್ಯೋ ಪಾಪ! ಯಾವಾಗ ಸತ್ತೋದ್ಲು?" ಅಂತಹ ಕನಿಕರದ ಮಾತುಗಳಿಂದ ಸುಂದರಮ್ಮನಿಗೆ ರೇಗಿದರೂ ಸಮಾಧಾನದಿಂದಿರಲು ಯತ್ನಿಸುತ್ತಾ ಆಕೆ ಅಂದಳು: "ಬೆಳಗಿನ ಜಾವ ಮೂರು ಗಂಟೇಲಿ, ಅಂದರೆ ಇವತ್ತು ಕೊನೆ ದಿನ ನ್ನನ ಡ್ಯೂಟಿ ಮುಗಿಯುವ ದಿನ ಈ ರೀತಿ ಆಯಿತಲ್ಲಾ ಎಂದುಕೊಂಡಳು. ಅಷ್ಟರಲ್ಲಿ ಅವಳಿಗೆ ಇನ್ನೊಂದು ಸುದ್ದಿ ಬರುತ್ತದೆ. ಈ ತಿಂಗಳು ಪೂರ್ತಿ ಈ ಮಗುವನ್ನು ನೀನೆ ನೋಡಿಕೊಳ್ಳಬೇಕಂತೆ ಡಾಕ್ಟರ್‌ರವರಿಂದ ಈ ಮಾತು ಬಂದಿದೆ ಎಂದಾಗ ಸುಂದರಮ್ಮ ನರ್ಸ್‌ಗೆ ಎಲ್ಲಿಲ್ಲದ ಕೋಪ ಬರುತ್ತದೆ. ಆದರೆ ವಿಧಿಯಿಲ್ಲದೆ ನೋಡಿಕೊಳ್ಳಬೇಕು ಎಂದು ಒಂದೆರಡು ದಿನ ಯಾಂತ್ರಿಕವಾಗಿ ಆ ಮಗುವಿನ ಸುಶ್ರೂಷೆ ಮಾಡಿದಳು ಅನಂತರ ನರ್ಸ್‌ಗಳು ಕೆಲವೊಂದು ತಾಯಂದಿರು ಮಗುವಿಗೆ ಪೌಡರ್, ಬಟ್ಟೆ ಇನ್ನಿತರೆ ವಸ್ತುಗಳನ್ನು ಕೊಡಲಾರಂಬಿಸಿದರು ನಂತರ

ಸಿಸ್ಟರ್ಸ್‌ಗಳು ಆ ಮಗುವನ್ನು ಎತ್ತಿಕೊಳ್ಳಲು ಹೋದಾಗ ಮುಟ್ಟಬೇಡಿ ಕಣ್ರೋ ಎಂದು ರೇಗುತ್ತಿದ್ದಳು. ಅಂದರೆ ಆ ಮಗುವನ್ನು ಯಾರು ಮುಟ್ಟಬಾರದು ಅದು ನನಗೆ ಸೇರಿದ್ದು ಎಂಬ ಭಾವನೆ. ಮಗೂಗೆ ಏನೆಂದು ಹೆಸರು ಇಟ್ಟಿದ್ದೀಯಾ ಎಮದು ಕೇಳಿದಾಗ 'ಮಲ್ಲಿಗೆ' ಎಂದು ಹೇಳುತ್ತಿದ್ದಳು. ಹೀಗೆ ಒಂದು ತಿಂಗಳು ಕಳೆದು ಇನ್ನೊಂದೇ ಒಂದು ದಿನವಿದೆ ಎಂದು ತಿಳಿದಾಗ ಅ ಮಗು ನನಗೆ ಸಿಗುವುದಿಲ್ಲ ನನ್ನ ಡ್ಯೂಟಿ ಮುಗಿದು ಪಕ್ಕದ ವಾರ್ಡಿಗೆ ಸಿಪ್ಟ್ ಆಗುತ್ತೇನೆ. ಈ ಮಗುವನ್ನು ಮರೆಯಬೇಕು ಎಂದು ಎಷ್ಟೇ ಪ್ರಯತ್ನಿಸಿದರೂ ಎಲ್ಲಿ ಕುಳಿತರೂ ಆ ಮಗುವಿನ ನಗು, ಅವಳ ಕಣ್ಣಿನ ಮುಂದೆ ಇರುತ್ತಿತ್ತು. ಎನೋ ಒಂದು ರೀತಿ ತಳಮಳ ದಿನವೆಲ್ಲಾ ಚಿಂತಿಸಿ ಮಗು ಮಲ್ಲಿಗೆ ಅದನ್ನು ನೋಡುತ್ತಾ ದುಃಖ ಒತ್ತರಿಸಿ ಆಕೆಯ ಕಣ್ಣುಗಳು ತುಂಬಿ ಬಂದವು.

"ಅಂದಿನವರೆಗೆ ಅ ಮಗುವಿಗೆ ತಾನು ತಾಯಿಯಾಗಿದ್ದೆ, ಇನ್ನು ಮಲ್ಲಿಗೆ ತಬ್ಬಲಿ!. .

ತೊಟ್ಟಿಲ ಮೇಲೆ ಕೈಯಿರಿಸಿ ಸುಂದರಮ್ಮ ನಿಂತಳು ತನ್ನ ಎದೆ ಗುಂಡಿಗೆ ಸ್ತಬ್ಧವಾದ ಹಾಗೆ ಲೋಕವ್ಯಾಪರವೆಲ್ಲಾ ಚಲಿಸದೆ ನಿಂತ ಹಾಗೆ ಆಕೆಗೆ ಭಾಸವಾಯಿತು"

ಚಿಂತಿಸಿ ಅದೆಷ್ಟು ಹೊತ್ತು ಕಳೆಯಿತೋ ನಂತರ ಸುಧಾರಿಸಿಕೊಂಡು ಡಾಕ್ಟರ್ ಬಳಿಗೆ ಹೋದಳು ಸುಂದರಮ್ಮ ನರ್ಸ್ ಒಣಗಿ ಹೋಗಿದ್ದ ತುಟಿಗಳನ್ನು ಸವರಿಕೊಳ್ಳುತ್ತಾ ಮೆಲ್ಲನೆ ಮಾತಾಡಿದಳು. "ಹಾಸ್ಪಿಟಲ್ ಬೇಬಿನ ನನಗೆ ಕೊಡಿ ಡಾಕ್ಟ್ರೇ ನಾನೆ ಸಾಕಿ ಬೆಳೆಸ್ತೇನೆ!" ಡಾಕ್ಟರ್ ಮುಖದಲ್ಲಿ ನಿಜವಾಗಲೂ ಆಶ್ಚರ್ಯವಾಯಿತು. ಒಂದು ಕ್ಷಣ ಅವಳನ್ನೇ ನೋಡತೊಡಗಿದರು. ನಂತರ ನಸುನಕ್ಕು ಆ ಮಗುವನ್ನು ಅವಳಿಗೆ ಕೊಡುತ್ತಾರೆ. ಅಂದರೆ ಕಠಿಣವಾಗಿದ್ದ ಅ ಹೆಣ್ಣಿನ ಮನಸ್ಸು ಯಾವ ರೀತಿ ಮಾತೃ ಸಂವೇದನೆಗೊಳಪಡುತ್ತದೆ. ತಾಯಿಯಲ್ಲದಿದ್ದರೂ ತಾಯ್ತನವೆಂಬುದು ಮಗುವಿಗಾಗಿ ಒಡಲು ಹೇಗೆ ತಡವರಿಸುತ್ತದೆ ಎಂಬುದು ಅನುಪಮಾರವರು ಬರೆದಿದ್ದಾರೆ.

ಈಸಬೇಕು ಇದ್ದು ಜಯಿಸಬೇಕು ಈ ಕಥೆಯಲ್ಲಿಯೂ ಸರಸಿಯ ಗಂಡ ರಂಗಣ್ಣ ಇಬ್ಬರೂ ಅನ್ಯೋನ್ಯವಾಗಿರುತ್ತಾರೆ. ಈ ಸಂದರ್ಭದಲ್ಲಿ ಒಂದು ಗಳಿಗೆಯೂ ಬಿಟ್ಟಿರಲಾರದ ರಂಗಣ್ಣನ ಪ್ರೀತಿಯನ್ನು ಸಹಿಸದ ತಾಯಿಯು ನನಗೆ ಮೊಮ್ಮಗು ಇಲ್ಲದೆ, ಸಾಯುತ್ತೆನೋ ಎನ್ನುತ್ತಾಳೆ. ಇದಕ್ಕೆ ಉತ್ತರವಾಗಿ ರಮಗಣ್ಣ ಹೆಂಡತಿಯ ಮೇಲೆ ಆ

ತಪ್ಪನ್ನು ಹೊರಿಸುತ್ತಾನೆ. ಆದರೆ ಸರಸಿಗೆ ಇದು ನನ್ನೊಬ್ಬಳದೇ ತಪ್ಪಾ ಎಂದು ಕೇಳುವಷ್ಟು ಧೈರ್ಯವಿರುವುದಿಲ್ಲ. ಅಂದಿನ ಕಾಲದಲ್ಲಿಯೇ ಹೆಣ್ಣು ಎಷ್ಟೆಲ್ಲಾ ತೊಂದರೆಗಳನ್ನು ಅನುಭವಿಸಬೇಕಿತ್ತು. ಇದು ಮಕ್ಕಳಿಲ್ಲದ ಸಮಸ್ಯೆಗೆ ಗಂಡು ಹೆಣ್ಣು ಇವರಿಬ್ಬರೂ ಕೂಡ ಸಮಭಾಗಿಗಳು ಆದರೆ ಹೆಣ್ಣನ್ನೇ ದೃಷ್ಟಿಯಲ್ಲಿರಿಸಿಕೊಂಡು ಆಕೆಗೆ ನಿಂದಿಸುವ ಮಾತುಗಳು ಅವಳನ್ನು ಕಂಡರೆ ಕಡುಕೋಪಗೊಳ್ಳುವ ಗಂಡನ ಕೋಪ ಇದೆಲ್ಲವನ್ನು ಅನುಪಮಾ ಅವರು ಸವಿಸ್ತಾರವಾಗಿ ಚಿತ್ರಿಸಿದ್ದಾರೆ. ಅನುಪಮ ಅವರು ತಿಳಿಸಿರುವಂತೆ ಸ್ತ್ರೀ–ಪುರುಷರೆಂಬ ಅಂತರವಿಲ್ಲದ. ಆದರೆ ಸಹಕಾರದಿಂದ ಕೂಡಿದ ನಿರಂತರ ಯಾಂತ್ರಿಕ ದುಡಿಮೆ, ಉಸಿರಾಡುವ ಹೋರಾಟಕ್ಕಾಗಿ, ಹಸಿವು, ಬಡತನ, ಅಜ್ಞಾನಗಳು, ಮೇಲಿನವರ ದಬ್ಬಾಳಿಕೆಗಳು, ಸ್ವಾರ್ಥ ಕ್ರೌರ್ಯಗಳಿಗೆ ಇವರು ಸದಾ ಬಲಿಯಾಗುವಂತೆ ಮಾಡುವ ಮೂಲ ಕಾರಣಗಳು ನಿರಕ್ಷರತೆ, ಮೌಢ್ಯ, ಜಾತಿ, ಧರ್ಮಗಳ ವಿವಿಧ ಸ್ತರದ ಕಟ್ಟುಪಾಡುಗಳು ಈ ಅಂಶವನ್ನು ತುಂಬಾ ನೈಜವಾಗಿ ಸರಳವಾಗಿ ಸಂಭಾಷನೆಗಳ ಮೂಲಕ ಸರಳವಾಗಿ ಚಿತ್ರಿಸುತ್ತಾರೆ. ಸ್ತ್ರೀ–ಪುರುಷರ ಸಂಬಂಧ ಸಮಾಜದ ವಿವಿಧ ಸ್ತರಗಳಲ್ಲಿ ವಿವಾಹ, ಕುಟುಂಬ, ದುಡಿಮೆಗಳ ನೆಲೆಗಳಲ್ಲಿ ಅಯಾಯಾ ಸ್ತರದಲ್ಲಿ ಪರಸ್ಪರ ಅವಲಂಬಿತವಾದವು ಎಂಬುದನ್ನು ಅನುಪಮಾ ಗುರುತಿಸುತ್ತಾರೆ.

"ಅನುಪಮಾ ಅವರು ಸ್ತ್ರೀಯರ ಆಕಾಂಕ್ಷೆಗಳನ್ನು ಕುರಿತು ಬರೆದರು. ಕೆಳಜಾತಿ, ವರ್ಗಗಳ ಮಹಿಳೆಯರ ಬದುಕಿನ ತುಂಬ ವ್ಯಾಪಿಸಿರುವ ಸಮಸ್ಯೆಗಳನ್ನು ಅನುಪಮಾ ತುಂಬ ಸಹಾನುಭೂತಿಯಿಂದ ಚಿತ್ರಿಸಲು ಮಾಡಿದ ಯತ್ನಗಳನ್ನು 'ಕಣಿವೆಗೆ ಬಂತು ಬೇಸಿಗೆ' ಇನ್ನು ಮುಂತಾದವುಗಳಲ್ಲಿ ಕಾಣಬಹುದು. ಈ ರೀತಿಯಲ್ಲಿ ಸ್ತ್ರೀವಾದಿ ನೆಲೆಯಿಂದ ಸಾಮಾಜಿಕ ಅನುಭವಗಳನ್ನು ಅರ್ಥೈಸುವ ಬಗೆಬಗೆಯ ಯತ್ನಗಳೂ ಜಾತಿ, ವರ್ಗ, ಅಸಮಾನತೆಗಳ ನೆಲೆಯ ಮಹಿಳಾ ಸ್ಥಿತಿಯ ಶೋಧನಾ ಯತ್ನಗಳಿಗೂ ಏಕಸೂತ್ರವೆಂದು ಗ್ರಹಿಸಬಹುದಾದ ವೈಚಾರಿಕತೆಯನ್ನು ರೂಪಿಸುವುದರಲ್ಲಿ ಅನುಪಮಾ ರಚನೆಗಳಲ್ಲಿ ಕೊರತೆ ತಲೆದೋರುತ್ತದೆ. ಈ ಎರಡೂ ಮಹಿಳಾ ಪ್ರಪಂಚಗಳನ್ನು ಬಿಡಿಬಿಡಿಯಾಗಿ ನೊಡಲು ಯತ್ನಿಸುವ ಬಗೆ, ಅವರ ಸ್ತ್ರೀವಾದಿ ಚಿಂತನೆಯಲ್ಲಿನ ಸಮಗ್ರಾಂಶದ ಅಭಾವದತ್ತ ಬೆರಳು ಮಾಡುವಂತಿದೆ."

"ಜನರ ಜೀವನದ ವಾಸ್ತವ ಪರಿಸರವನ್ನು ರೂಪಿಸಿ, ಕಥೆ ಹೆಣೆಯುವುದು ಅನುಪಮಾ ಅವರ ವಿಶಿಷ್ಟತೆ, ಯಾವುದೇ ಜಾತಿ, ವರ್ಗ, ವೃತ್ತಿಗಳ ಜನರ ಜೀವನದ ರೀತಿ–ನೀತಿ, ಭಾಷೆ, ಮೋಕ್ಷ ಮೊದಲಾದ ವೈಶಿಷ್ಟ್ಯತೆಗಳನ್ನು ವಿವರಗಳಲ್ಲಿ

ಸಂಗ್ರಹಿಸಿಡುವಲ್ಲಿ ಅವರು ತುಂಬ ಎಚ್ಚರ ವಹಿಸುತ್ತಾರೆ. ಆದರೆ ನಿರಂಜನರ ಐತಿಹಾಸಿಕ ರಚನೆಗಳಲ್ಲಿರುವಂಥ ಅತಿ ವಿಶಿಷ್ಟತೆ, ಶಿಷ್ಟತೆ ಅಲ್ಲದಿದ್ದರೂ ಎಲ್ಲ ಪಾತ್ರ, ಸನ್ನಿವೇಶಗಳನ್ನು ಸಿದ್ಧಾಂತದ ಪ್ರಾತಿನಿಧ್ಯಕ್ಕಾಗಿಯೇ ಸೃಷ್ಟಿಸುವಂಥ ಕೃತಕತೆ ಇವರ ರಚನೆಗಳಲ್ಲೂ ಪ್ರಬಲವಾಗಿದೆ.

ಅನುಪಮಾ ಅವರು ಹೆಣ್ಣಿನ ವಿವಿಧ ರೀತಿಯ ಸಂವೇದನೆಗೆಳನ್ನು ತಮ್ಮ ಕಥೆಗಳಲ್ಲಿ ಅಭಿವ್ಯಕ್ತಪಡಿಸಿದ್ದಾರೆ. ಸಾಮಾನ್ಯವಾಗಿ ಒಬ್ಬ ಲೇಖಕಿ ತನ್ನ ಸಂವೇದನೆಗಳನ್ನು ಎಷ್ಟು ಸಹಜವಾಗಿ ಅಭಿವ್ಯಕ್ತಪಡಿಸಬಹುದೋ ಅಷ್ಟೇ ಆಪ್ತವಾಗಿ ಅನುಪಮಾ ಅವರು ಸ್ತ್ರೀ ಬದುಕನ್ನು ಸಂವೇದನಾ ಪೂರ್ವಕವಾಗಿ ಕಟ್ಟಿಕೊಟ್ಟಿದ್ದಾರೆ. ಕೆಲವು ಕಥೆಗಳಲ್ಲಿ ಸಮಾಜದ ಸ್ತ್ರೀಯರ ಸಂವೇದನೆಗಳು ಕಂಡುಬಂದರೆ, ಕೆಲವು ಕಥೆಗಳಲ್ಲಿ ಅದಕ್ಕೆ ವಿರುದ್ಧವಾದ ಆಧುನಿಕ, ಪ್ರತಿಭಟನಾಶೀಲ ಸ್ತ್ರೀಯರ ಸಂವೇದನೆಗಳು ಕಂಡುಬರುತ್ತವೆ. ಅನುಪಮಾ ಅವರ ಸ್ತ್ರೀ ಸಂವೇದನೆಯೆಲ್ಲವೂ ಗ್ರಾಮೀಣ ಸ್ತ್ರೀಯರವೇ ಆಗಿವೆ. ಗ್ರಾಮೀಣ ಮಹಿಳೆಯರ ಬದುಕು ಇವರ ಕಥೆಗಳಲ್ಲಿ ಅಭಿವ್ಯಕ್ತವಾಗಿವೆ. ಅನುಪಮಾರವರು ವರ್ತಮಾನದ ಹಿನ್ನಲೆಯಲ್ಲಿ ವಾಸ್ತವತೆಯ ಆಧಾರದ ಮೇಲೆ ಸ್ತ್ರಿ ಬದುಕನ್ನು ನೋಡಿದ್ದಾರೆ.

ಮಹಿಳೆಯ ಬದುಕು ಕಾಲಾಂತರದಲ್ಲಿ ಅನೇಕ ಸಂಕೀರ್ಣ ಸ್ತರಗಳಲ್ಲಿ ವಿಸ್ತರಿಸುತ್ತಾ, ಹೆಣ್ಣಿನ ಬದುಕನ್ನು ದಾರುಣಗೊಳಿಸುತ್ತದೆ. ಇದು ಇತಿಹಾಸ ಹಾಗೂ ವಾಸ್ತವದ ಯಜಮಾನ ಸಂಸ್ಕೃತಿಯ ವಿಕಾಸದಿಂದ ಹಾಗೂ ಸಾಮಾಜಿಕ ಸ್ಥಾನಮಾನ ಸಂಸ್ಕೃತಿಯ ವಿಕಾಸದಿಂದ ಹಿಂದೆ ಸರಿಯಲ್ಪಟ್ಟ ಮಹಿಳೆ ಸಾಮಾಜಿಕ ಸ್ಥಾನಮಾನ ಹಾಗೂ ಶಿಕ್ಷಣ ಎರಡರಿಂದಲೂ ಅವಕಾಶ ವಂಚಿತಳಾದಳು. ಈ ಹಿನ್ನೆಲೆಯಲ್ಲಿ ಕಾಲಕಾಲಕ್ಕೆ ಹುಟ್ಟಿಕೊಂಡ ಧರ್ಮಶಾಸ್ತ್ರಗಳು ಮಹಿಳೆಯ ಶಕ್ತಿ ಪಾಂಡಿತ್ಯ ವಿಶ್ವಾಸಗಳನ್ನೇ ಕುಗ್ಗಿಸಿದವು.

ಮಹಿಳೆಯ ಅನುಭವಗಳು ಆತ್ಮವಿಸ್ಮೃತಿಯ ಕಾರ್ಗತ್ತಲಲ್ಲಿ ಘೋರ ವೇದನೆಯನ್ನು ಅನುಭವಿಸುತ್ತ ಕಾಲ ಕಳೆಯುತ್ತಿದ್ದ ಸಮಯದಲ್ಲಿ ಇಂಥ ಮಹಿಳಾ ಚೈತನ್ಯಗಳಿಗೆ ಭರವಸೆಯ ಬೆಳಕನ್ನು ನೀಡಿದವರು ಶರಣರು. ಹನ್ನೆರಡನೇ ಶತಮಾನದಲ್ಲಾದ ಕಾರಣ ಚಳುವಳಿಯು ಕರ್ನಾಟಕದ ಸ್ತ್ರೀ ಸಮುದಾಯಕ್ಕೆ ಹೊಸ ಹೆಜ್ಜೆ ಗುರುತುಗಳನ್ನು ಮೂಡಿಸಿತು. ಇದು ಮಹಿಳೆಗೆ ಸ್ವಾತಂತ್ರ್ಯ ಸಮಾನತೆ, ಸ್ವಾವಲಂಬನೆಗಳ ಹೊಸ ಹೆಬ್ಬಾಗಿಲನ್ನೆ ತೆರೆಯಿತು. ಅದರ ಪರಿಣಾಮವಾಗಿ ಅಕ್ಕ ಮಹಾದೇವಿ, ನೀಲಾಂಬಿಕೆ ಮುಂತಾದ ದಿಟ್ಟ ಸಾಧಕಿಯರು ಮೂಡಿಬಂದು ಹೊಸ

ತಲ್ಲಣವನ್ನುಂಟು ಮಾಡಿದರು. ಪ್ರಾಚೀನ ಕಾಲದ ಸ್ತ್ರೀಯರು ಸ್ವಾತಂತ್ರ್ಯವನ್ನು ಅನುಭವಿಸಲು ಸ್ವೇಚ್ಛೆಯಿಲ್ಲದವರು ಕುಡುಕ, ಜೂಜುಗಾರನಂಥ ಗಂಡನಿದ್ದರೂ 'ಪತಿಯೇ ಸರ್ವಸ್ವ' ಪತಿಯೇ ದೇವರೆಂದು ಪೂಜಿಸಬೇಕಿತ್ತು. ಹಾಗೆಯೇ ಬಾಳಬೇಕಿತ್ತು. "ಪಿತಾರಕ್ಷತಿ ಕೌಮಾರೇಭರ್ತಾ ರಕ್ಷತಿ ಯೌನೆ ರಕ್ಷಂತಿ ಸ್ಥಾವರೆ ಪುತ್ರಾನಸ್ತ್ರೀ ಸ್ವಾತಂತ್ರ್ಯ ಮೂರ್ಹತೆ" ಎಂಬ ಶಾಸನ ವಿಧಿಸಿ ಭಾರತೀಯ ನೈಜ ಧರ್ಮಶಾಸ್ತ್ರಕ್ಕೆ ಕಳಂಕವನ್ನು ತಂದು ಸ್ತ್ರೀಯರ ಬಾಯಿಗೆ ಕಡಿವಾಣ ಹಾಕಲಾಯಿತು. ಇದೇ ಮನು 'ಯತ್ರನಾರ್ಯಸ್ತು, ಪೂಜ್ಯಂತೆ ರಮಂತೆ ತತ್ರ ದೇವತಾ' ಅಂದರೆ ಎಲ್ಲಿ ಸ್ತ್ರೀಯರು ಪೂಜಿಸಲ್ಪಡುತ್ತಾರೋ ಅಲ್ಲಿ ದೇವತೆಗಳೂ ನೆಲೆಸುತ್ತಾರೆ ಎಂದು ಹೇಳಿ ಸ್ತ್ರೀಯರನ್ನು ಪೂಜಿಸಬೇಕೆಂದು ಸ್ತ್ರೀ ಪೂಜಿಸಲ್ಪಡುವ ದೇವತೆಯೆಂದು ಫಲಕ ಹಾಕಿ ಇಬ್ಬಂದಿತವನ್ನು ತೋರಿಸಿ ಸ್ತ್ರೀಕುಲದ ದುರಂತ ಇತಿಹಾಸದ ಮೇಲೆ ಕಪ್ಪುಗೆರೆ ಎಳೆಯಲಾಯಿತು.

ಕತ್ತಲೆಯ ಹಾದಿಯಲ್ಲಿ ನಡೆದು ಪುನಃ ಬೆಳಕಿನತ್ತ ನಡೆಯಬೇಕೆಂಬ ಹಂಬಲದಿಂದ ಅನಾದಿಕಾಲದಿಂದಲೂ ಹೆಜ್ಜೆ ಹೆಜ್ಜೆಗೂ ಎದುರಾಗುತ್ತಿರುವ ಸವಾಲುಗಳಿಗೆ ಸೆಡ್ಡು ಹೊಡೆದು ಆತ್ಮವಿಶ್ವಾಸ, ಧೈರ್ಯ ನೈತಿಕ ಬಲಗಳಿಂದ ತನ್ನನ್ನು ತನ್ನತನವನ್ನು ಉಳಿಸಿಕೊಂಡು ಬೆಳೆಸಿಕೊಂಡು ಮುನ್ನೆಡೆಯುತ್ತಿರುವ ಮಹಿಳಾ ಬದುಕಿಗೆ ಆಕೆಯದೇ ಆದ ಒಂದು ಪ್ರತ್ಯೇಕ ಘೋರ ಅಮಾನುಷ ಕ್ರೂರ ಚರಿತ್ರೆಯಿದೆ. ಆದರೆ ಸ್ತ್ರೀ ಸಂವೇದನೆಯ ನೀತಿಯಿಂದ ಅವಳನ್ನು ಅವಲೋಕಿಸಿದಾಗ ಒಂದೊಂದು ಅಕ್ಷರಗಳೂ ಪುರುಷರ ಕ್ರೌರ್ಯದ ರಕ್ತದ ಹನಿಗಳಿಂದ ತೊಯ್ದು ತೊಪ್ಪೆಯಾದದ್ದು ಕಾಣುತ್ತದೆ. ಅದು ಅವರೊಂದಿಗೆ ಅಲ್ಲಲ್ಲಿ ಮರುಭೂಮಿಯ ಓಯಾಸಿಸ್‌ನಂತೆ ಎಲ್ಲಿಂದಲೋ ನುಸುಳಿಕೊಂಡು ಬಂದ ಆಶಾಕಿರಣಗಳಾಗಿವೆ. ಅವಳ ನಿರ್ಜೀವತೆಗೆ ಉಸಿರನ್ನು ತುಂಬಿ ಅವಳನ್ನು ಚರಿತ್ರೆಯ ಹಾದಿಯಲ್ಲಿ ಮುನ್ನಡೆಯಲು ಪ್ರೇರೇಪಿಸಿದಷ್ಟು ಸುಳ್ಳೆಂದು ಯಾರು ಹೇಳಿದರೂ ಸ್ಪಷ್ಟ ಸ್ಥಿತಿಗಳಿಗೆ ಸಹಜತೆಯನ್ನು ನೀಡಲು ನಿರಂತರ ಶೋಷಣೆಗೆ ಒಳಗಾಗುತ್ತಲೇ ಇದ್ದಾಳೆ. ಇದು ಇಂದಿನ ಮಾತಲ್ಲ ಹಿಂದಿನಿಂದಲೂ ಕಾಲಕಾಲಕ್ಕೆ ಬದಲಾದ ಸಾಮಾಜಿಕ ಮೌಲ್ಯಗಳಿಗೆ ತಲೆಬಾಗಿ ಧರ್ಮಶಾಸ್ತ್ರಜ್ಞರು ಹಾಕಿದ ಕಟ್ಟಳೆಗಳನ್ನು ದಾಟಿದ ಇವಳು ಇದುವರೆಗೆ ಸಾವಿರಾರು ವರ್ಷಗಳಿಂದ ತನ್ನ ಕಣ್ಣೀರಿನ ಹಾದಿಯನ್ನು ಸವೆಸುತ್ತಾ ಬಂದಿದ್ದಾಳೆ ಎನ್ನುವುದು ಗಮನಾರ್ಹವಾದ ಅಂಶವಾಗಿದೆ.

ಈ ಮೇಲಿನ ಎಲ್ಲಾ ಅಂಶಗಳನ್ನು ನೋಡಿದಾಗ ಮಹಿಳೆಯ ಇಂಥ ಸ್ಥಿತಿಗೆ ಪುರುಷ ಪ್ರಧಾನವಾದ ಮತ್ತು ಸಾಂಪ್ರದಾಯಿಕವಾದ ಸಮಾಜವೇ ಮೂಲಕಾರಣವೇ

ಹೊರತು ಅವಳೇ ಅದಕ್ಕೆ ಹೊಣೆಗಾರಳಲ್ಲ. ಇಂತಹ ಸಂಗತಿಗಳನ್ನು ಗುರುತಿಸಿ ಸ್ತ್ರೀ ಸಂವೇದನೆಯನ್ನು ಕುರಿತು ಸಹಜವಾಗಿ ಎಲ್ಲರೂ ಚಿಂತಿಸಬೇಕಾದ ಅಂಶವಾಗಿದೆ. ಮತ್ತು ಅಗತ್ಯವೂ ಆಗಿದೆ. ಹಾಗೆಯೇ ಇದೇ ಸ್ತ್ರೀ ಸಂವೇದನೆಯ ಮುಖ್ಯ ಆಶಯವೂ ಆಗಿದೆ ಎಂದು ಹೇಳಬಹುದಾಗಿದೆ.

# ಅಧ್ಯಾಯ – ೭

# ಉಪಸಂಹಾರ

ಅನುಪಮಾ ಅವರು ಕನ್ನಡ ಸಾಹಿತ್ಯಲೋಕ ಕಂಡಂಥ ವಿಶೇಷ ಬರಹಗಾರ್ತಿ. ಜಾತಿ ಧರ್ಮಕ್ಕೆ ಅತೀತರಾಗಿ ಬದುಕಿಗೆ ವಾಸ್ತವತೆಗಳನ್ನು ತಮ್ಮ ಬರಹಗಳಲ್ಲಿ ಮಾತ್ರವಲ್ಲದೆ ಸಾಮಾಜಿಕ ಜೀವನದಲ್ಲಿಯೂ ಬದಲಾವಣೆಯ ದೃಷ್ಟಿಯಿಂದ ನೋಡಿದ ವಿಶಿಷ್ಟ ಮನಸ್ಥಿತಿ ಉಳ್ಳವರು. ನವ್ಯ–ನವ್ಯೋತ್ತರ ಕಾಲಘಟ್ಟಗಳ ನಡುವೆ ತಮ್ಮದೇ ವಿಶಿಷ್ಟ ಅಭಿವ್ಯಕ್ತಿ ಮಾರ್ಗಗಳನ್ನು ರೂಪಿಸಿಕೊಂಡವರು. ಇವರು ಕನ್ನಡದ ಮಹತ್ವದ ಕಥೆಗಾರರಲ್ಲಿ ಒಬ್ಬರು.

ಅನುಪಮಾ ಅವರು ಕಥೆಗಾರರಾಗಿ ಬಹಳ ಪ್ರಮುಖರೆನಿಸುತ್ತಾರೆ. ಕಾರಣ, ಅವರ ಕಥೆಗಳಲ್ಲಿ ಮನುಷ್ಯನ ಜೀವನದ ವಿವಿಧ ಸಂವೇದನೆಗಳನ್ನು ವಾಸ್ತವ ಪ್ರಪಂಚದ ಹಿನ್ನೆಲೆಯಲ್ಲಿ ಅನಾವರಣ ಮಾಡುತ್ತಾ ಹೋಗುತ್ತದೆ. ಅನುಪಮಾ ಅವರು ತಮ್ಮ ಕಥೆಗಳಲ್ಲಿ ಆಧುನಿಕತೆ ಸಾಮಾಜಿಕ ಬದುಕಿನಲ್ಲಿ ತಂದೊಡ್ಡುವ ಸಮಸ್ಯೆಗಳು, ಅವರಿಂದ ಬಿಡುಗಡೆ ಹೊಂದಲು ಹೆಣಗುವ ರೀತಿ, ನಂತರ ಆ ಸಮಾಜ ಆಧುನಿಕತೆಯಿಂದ ಹೇಗೆ ಅವನತಿ ಹೊಂದುವುದು ಎಂಬ ಕಠೋರ ವಾಸ್ತವಗಳನ್ನು ಗುರುತಿಸುತ್ತಾರೆ. ಇವರ ಕಥೆಗಳಲ್ಲಿ ಸ್ಥಳೀಯ ಸಂಸ್ಕೃತಿ, ಕೃಷಿ ಭಾಷೆಗೆ ಹೆಚ್ಚು ಒತ್ತು ನೀಡಿದ್ದಾರೆ. ಅವರು ದಿನನಿತ್ಯ ಗ್ರಾಮ್ಯ ವ್ಯಕ್ತಿಗಳು ವ್ಯವಹರಿಸುವ ಭಾಷೆಯನ್ನೇ ಕಥೆಗಳಲ್ಲಿ ತಂದಿದ್ದಾರೆ.

ಅನುಪಮಾ ಅವರ ಸಾಹಿತ್ಯದಲ್ಲಿ ಹಲವಾರು ಸಂವೇದನೆಗಳು ಕಂಡುಬರುತ್ತವೆ. ಅದರಲ್ಲೂ ಸ್ತ್ರೀ ಸಂವೇದನೆಯು ಅವರ ಕಥೆಗಳಲ್ಲಿ ಬಹಳ ವಿಶಿಷ್ಟವಾಗಿ ಅಭಿವ್ಯಕ್ತವಾಗಿದೆ. ಗ್ರಾಮೀಣ ಪ್ರದೇಶದ ಸ್ತ್ರೀಯರ ಬದುಕಿನ ವಿವಿಧ ರೀತಿಯ ಅನುಭವಗಳು, ಆ ಅನುಭವಗಳಿಗೆ ಅವರ ಪ್ರತಿಕ್ರಿಯೆಗಳು ಇವುಗಳನ್ನೆಲ್ಲಾ ಅನುಪಮಾ ತಮ್ಮ ಕಥೆಗಳಲ್ಲಿ ಬರೆದಿಟ್ಟಿದ್ದಾರೆ. ಅನುಪಮಾ ಅವರ ಕಥೆಗಳಲ್ಲೆಲ್ಲೂ ಪಟ್ಟಣ ಪ್ರದೇಶದ ಸ್ತ್ರೀಯರ ಸಂವೇದನೆಗಳು ಅನಾವರಣಗೊಳ್ಳುವುದಿಲ್ಲ. ಇದಕ್ಕೆ ಬದಲು ಗ್ರಾಮೀಣ ಮಹಿಳೆಯರ ಸಂವೇದನೆಗಳು ಅನಾವರಣಗೊಳ್ಳುವುದಿಲ್ಲ. ಇದಕ್ಕೆ ಬದಲು ಗ್ರಾಮೀಣ ಮಹಿಳೆಯರ ಸಂವೇದನೆಗಳೇ ಹೆಚ್ಚು ಮಡುಗಟ್ಟಿ ನಿಂತಿವೆ. ಅದಕ್ಕೆ ಕಾರಣ ಅನುಪಮಾ ಅವರು ಗ್ರಾಮೀಣ ಸಂಸ್ಕೃತಿಯ ಕಡೆಗೆ ಹೆಚ್ಚು ಒಲವನ್ನು ತೋರಿರುವುದು.

ನಮ್ಮ ದಿನನಿತ್ಯದ ಜೀವನದಲ್ಲಿ ನಾವು ಎಂದೋ ಅನುಭವಿಸಿದ್ದ ಪ್ರಸಂಗಗಳೇ ಅನುಪಮಾ ಅವರ ಕೈಗೆ ಸಿಕ್ಕಿ ಅಪರೂಪದ ಕಥೆಗಳಾಗಿವೆ. ಅವು ನಮ್ಮವೇ ಆದ ಅನುಭವಗಳು ಎಂಬಂತೆ ಅವರ ಕಥೆಗಳನ್ನು ಓದಿದವರಿಗೆ ಅನ್ನಿಸದಿರುವುದಿಲ್ಲ. ಅಷ್ಟರಮಟ್ಟಿಗೆ ಅವರು ತಮ್ಮ ಕಥೆಗಳಲ್ಲಿ ಸ್ತ್ರೀ ಸಂವೇದನೆಯನ್ನು ಅಭಿವ್ಯಕ್ತಪಡಿಸಿದ್ದಾರೆ.

ಅನುಪಮಾ ಅವರ ಸ್ತ್ರೀ ಬಗೆಗಿನ ನಿಲುವು ಬಹಳ ವಿಶಿಷ್ಟವಾದುದು. ಸಮಕಾಲೀನ ಸಮಾಜದಲ್ಲಿನ ಹೆಣ್ಣಿನ ವಿವಿಧ ಸಂವೇದನೆಗಳು ಅವರ ಕಥೆಗಳಲ್ಲಿ ಮಡುಗಟ್ಟಿ ನಿಂತಿದೆ. ಅನುಪಮಾ ಅವರು ಹೆಣ್ಣನ್ನು ತಾಯಿ, ಹೆಂಡತಿ, ಸೊಸೆ, ಗೃಹಿಣಿ ಮುಂತಾದ ಕೌಟುಂಬಿಕ ನೆಲೆಯಲ್ಲಿ ಗುರುತ್ತಿಸುತ್ತಾರಾದರೂ, ವಾಸ್ತವವಾದಿ ಹಿನ್ನೆಲೆಯಲ್ಲಿ ಅವರು ನೋಡುತ್ತಾರೆ. ಇವರ ಕಥೆಗಳಲ್ಲಿ ಕೆಲವೆಡೆ ಹೆಣ್ಣು ತನ್ನ ಮೇಲೆ ನಡೆಯುವ ಶೋಷಣೆಯನ್ನು ಪ್ರತಿಭಟಿಸಲಾರದೆ, ಅದಕ್ಕೆ ತನ್ನ ಪ್ರತಿಕ್ರಿಯೆಯನ್ನು ಹೊರಹಾಕದೆ ತನ್ನಲ್ಲಿಯೇ ನೋವನ್ನು ಅಡಗಿಸಿಟ್ಟುಕೊಂಡು ವ್ಯವಸ್ಥೆಗೆ ಹೊಂದಿಕೊಂಡಿದ್ದಾಳೆ. ಅದು ಅಂದಂದಿನ ಸಮಕಾಲೀನ ಸಮಾಜದ ಸ್ಥಿತಿಗತಿಯ ಪರಿಣಾಮ. ಆದರೆ ಮತ್ತೆ ಕೆಲವೆಡೆಯಲ್ಲಿ ತನ್ನ ಮೇಲಿನ ಶೋಷಣೆಯನ್ನು ಸಹಿಸಿ ಸಹಿಸಿ ತಾಳಲಾರದೆ ಪುರುಷ ವ್ಯವಸ್ಥೆಯ ವಿರುದ್ಧ ಸಿಡಿದೇಳುವ, ಪ್ರತಿಕ್ರಿಯಿಸುವ ಪ್ರಕ್ರಿಯೆಯೂ ಕಂಡುಬಂದಿದೆ. ಅಂದರೆ, ಸ್ತ್ರೀ ಸಂವೇದನೆಯ ದೃಷ್ಟಿಯಿಂದ ಇವರ ಕಥೆಗಳನ್ನು ಗಮನಿಸಿದ ಮೇಲೆ ತಿಳಿದು ಬರುವುದೇನೆಂದರೆ ಹೆಣ್ಣು ಕಾಣಲಾದ ಸ್ವಾತಂತ್ರ್ಯೋತ್ತರ ಭಾರತದಲ್ಲಿ ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳಲು, ತನ್ನ ಅಸ್ತಿತ್ವವನ್ನು ಸ್ಥಾಪಿಸಲು, ತನ್ನ ಮೇಲಿನ ಶೋಷಣೆಯ ವಿರುದ್ಧವಾಗಿ ಹೋರಾಡತೊಡಗಿದ್ದಾಳೆ ಎಂಬುದು.

ಅನುಪಮಾ ಅವರ 'ರೂವಾರಿಯ ಲಕ್ಷ್ಮೀ' ಕಥೆ ಅವರ ಇತರ ಕಥೆಗಳಿಗಿಂತಲೂ ವಿಶಿಷ್ಟವಾದದು. ಸ್ತ್ರೀ ಚಳವಳಿಯ ಹಿನ್ನೆಲೆಯಲ್ಲಿ ಇದು ಬಹಳ ಪ್ರಮುಖವೆನಿಸುತ್ತದೆ. ಹೆಣ್ಣಿನ ಹೋರಾಟಕ್ಕೊಂದು ಸ್ಪಷ್ಟ ರೂಪವೊಂದು ಇಲ್ಲಿ ಸಿಗುತ್ತದೆ. ಗ್ರಾಮೀಣ ಹೆಣ್ಣಿನ ಎಲ್ಲಾ ರೀತಿಯ ಸಂವೇದನೆಗಳು ಇಲ್ಲಿ ಸಂಮಿಳಿತಗೊಂಡಿವೆ.

ಅನುಪಮಾ ಅವರು ಪಾಶ್ಚಿಮಾತ್ಯ ಸ್ತ್ರೀವಾದದಿಂದ ಪ್ರಭಾವಿತರಾಗಿದ್ದಾರೆ ಎನಿಸುತ್ತದೆ. ಸ್ತ್ರೀವಾದಿ ಹಿನ್ನೆಲೆಯಲ್ಲಿ ಇವರ ಕಥೆಗಳ ಅಧ್ಯಯನ ಮುಖ್ಯ ಎನಿಸುವುದು. ಆ ಕಾರಣಕ್ಕಾಗಿ ಇಲ್ಲಿ ಪಾಶ್ಚಿಮಾತ್ಯ ಸ್ತ್ರೀವಾದವನ್ನು ಪ್ರತ್ಯೇಕ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

ಹತ್ತೊಂಬತ್ತು ಇಪ್ಪತ್ತನೇ ಶತಮಾನದಲ್ಲಿ ಮೇರಿ ವುಲ್ಫ್‌ಸ್ಟನ್ ಕ್ರಾಫ್ಟ್, ವರ್ಜೀನಿಯಾವುಲ್ಫ್, ಸಿಮೋನ್‌ದಬೋವಾ, ಬೆಟಿ ಫ್ರೇಡನ್, ಕೇಟ್ ಮಿಲೆಟ್ ಮುಂತಾದ ಸ್ತ್ರೀವಾದಿ ಚಿಂತಕಿಯರ ಚಿಂತನೆಗಳ ಫಲವಾಗಿ ಸ್ತ್ರೀವಾದ ಹೇಗೆ ಅಸ್ತಿತ್ವಕ್ಕೆ ಬಂದಿತು ಎಂಬುದರ ಚರ್ಚೆಯನ್ನು ಮಾಡಲಾಗಿದೆ.

ಸ್ತ್ರೀಸಂವೇದನೆ ಮತ್ತು ಅದರ ಸ್ವರೂಪ ಹೇಗೆ ಕಾಲದಿಂದ ಕಾಲಕ್ಕೆ ಹೇಗೆ ವಿಭಿನ್ನ ರೀತಿಯಲ್ಲಿ ಕನ್ನಡ ಸಾಹಿತ್ಯದಲ್ಲಿ ವ್ಯಕ್ತವಾಗಿದೆ ಎಂಬುದನ್ನು ಸಂಕ್ಷಿಪ್ತವಾಗಿ ಪ್ರತ್ಯೇಕ ಅಧ್ಯಾಯವೊಂದರಲ್ಲಿ ವಿವೇಚಿಸಿರುವುದು ಈ ನಿಬಂಧದ ಹಿನ್ನೆಲೆಯಲ್ಲಿ ಪ್ರಮುಖವೆನಿಸಿದೆ. ಕನ್ನಡ ಸಾಹಿತ್ಯದ ವಿವಿಧ ಕಾಲಘಟ್ಟಗಳಲ್ಲಿ ಸ್ತ್ರೀ ಹೇಗೆ ಪ್ರತಿಕ್ರಿಯಿಸಿದ್ದಾಳೆ ಎಂಬ ಅಂಶ ಇಲ್ಲಿ ತಿಳಿದುಬರುತ್ತದೆ.

ಆಧುನಿಕ ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆಯನ್ನು ಕುರಿತ ಹಾಗೆ ಹಲವಾರು ಲೇಖಕರು, ಲೇಖಕಿಯರು ತಮ್ಮ ಕಥೆ ಕಾದಂಬರಿ, ಕಾವ್ಯ, ನಾಟಕಗಳಲ್ಲಿ ತಂದಿದ್ದಾರೆ. ಅನುಪಮಾ ಅವರ ಕಥೆಗಳನ್ನು 'ಸ್ತ್ರೀ ಸಂವೇದನಾ' ದೃಷ್ಟಿಯಿಂದ ಅಧ್ಯಯನಕ್ಕೊಳಪಡಿಸಿದ ಮೇಲೆ ಹೆಣ್ಣಿನ ಬಗೆಗಿನ ಅನುಪಮಾ ಅವರ ನಿಲುವು ಇತರೆ ಎಲ್ಲಾ ಲೇಖಕಿಯರು ತರುವ ಸಂವೇದನೆಗಿಂತಲೂ ಭಿನ್ನವಾಗಿ, ವಿಶಿಷ್ಟವಾಗಿ ಕಂಡುಬರುತ್ತದೆ.

ಒಟ್ಟಾರೆಯಾಗಿ ಅನುಪಮಾ ಅವರ ಸಾಹಿತ್ಯದ ಮೇಲೆ ವಿವಿಧ ಆಯಾಮದ ಅಧ್ಯಯನಗಳು ನಡೆದಿದ್ದು, ಸ್ತ್ರೀ ಸಂವೇದನಾ ನಿಟ್ಟಿನ ಅಧ್ಯಯನ ನಡೆದಿರುವುದಿಲ್ಲ. ಹಾಗಾಗಿ ಈ ನಿಬಂಧ ಆ ದೃಷ್ಟಿಯಿಂದ ಬಹಳ ಮಹತ್ವವಾದುದು ಎನಿಸುತ್ತದೆ. ಜೀವನವನ್ನು ತಮ್ಮ ಸುತ್ತಲಿನ ಬದುಕನ್ನು ಬಹಳ ಆಳವಾಗಿ ವಿಶೇಷವಾದ ಗಮನವನ್ನು ಹರಿಸಿದ್ದರು ಎಂಬುದು ತಿಳಿಯುತ್ತದೆ. ಅಲ್ಲದೆ, ಒಬ್ಬ ಸೃಜನಶೀಲ ಹೆಣ್ಣು ಮನಸ್ಸು ತನ್ನ ಅನುಭವವನ್ನು ಸಾಹಿತ್ಯದ ಮುಖೇನ ತೆರೆದಿಟ್ಟಿದ್ದರೆ ಎಷ್ಟು ಪರಿಣಾಮಕಾರಿಯಾಗಿ

ಮೂಡಿಬರುತ್ತಿತ್ತೋ ಹಾಗೆ ಅನುಪಮಾ ಅವರು ಸಾಹಿತ್ಯ ಒಟ್ಟು ಸಾಧನೆ, ಅವರ ಇತಿವೃತ್ತ, ಅವರ ವೈದ್ಯಕೀಯ ಬದುಕು, ಅಧ್ಯಾಯದ ಸ್ವರೂಪ, ವ್ಯಾಪ್ತಿ, ಅವರ ಕಥೆಗಳಲ್ಲಿ ಸ್ತ್ರೀಸಂವೇದನೆ ಅಷ್ಟು ಪರಿಣಾಮಕಾರಿಯಾಗಿ ಆಪ್ತವಾಗಿ ಅನುಪಮಾ ಅವರು ಹೆಣ್ಣಿನ ಬದುಕನ್ನು ಅವಳ ಸಂವೇದನೆಯನ್ನು ಅನಾವರಣಗೊಳಿಸಿದ್ದಾರೆ ಎಂಬುದು ಈ ನಿಬಂಧದ ಮೂಲಕ ತಿಳಿದುಕೊಳ್ಳಬಹುದಾಗಿದೆ.

*****

## ಪರಾಮರ್ಶನ ಕೃತಿಗಳು

೧. ಡಾ.ಕೇಶವಶರ್ಮ.ಕೆ. ಮಾರ್ಕ್ಸ್‌ವಾದಿ ಸಾಹಿತ್ಯ, ವಿಮರ್ಶೆ, ೨೦೦೮, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ.

೨. ಪ್ರೇಮಾ ಆರ್..ಜಿ. ಅಪಚಂದ, ೨೦೧೦, ಲಿಂಗವ್ಯವಸ್ಥೆ ಸಂಕಥನ, ಗಿತಾಂಜಲಿ ಪುಸ್ತಕ ಪ್ರಕಾಶನ, ಶಿವಮೊಗ್ಗ,

೩. ಸರೋಜಾ ಎಸ್.ಸಂತಿ ಬಾನ್ಯಶ್ರಿ.ಹ. ದೊಡ್ಡಮನಿ, ಡಾ.ಈ. ಯರ್ರಿಸ್ವಾಮಿ.

೪. ಡ. ಹೇಮಲತಾ, ಎಚ್.ಎಂ. ಮಹಿಳಾ ಅಧ್ಯಯನ-೪, ಡಿ.ವಿ.ಕೆ.ಮೂರ್ತಿ, ಪ್ರಕಾಶನ, ಮೈಸೂರು.

೫. ಡಾ.ಅನುಪಮಾ ನಿರಂಜನ, ತಾಯಿ-ಮಗು, ಡಿ.ವಿ.ಕೆ. ಮೂರ್ತಿಪ್ರಕಾಶನ, ಮೈಸೂರು.

೬. ಡಾ.ಅನುಪಮ ನಿರಂಜನ, ನೆನಪು ಸಿಹಿ-ಕಹಿ, ಡಿ.ವಿ.ಕೆ. ಮೂರ್ತಿ ಪ್ರಕಾಶನ, ಮೈಸೂರು.

೭. ಡಾ.ಅನುಪಮಾ ನಿರಂಜನ, ದಾಂಪತ್ಯ ದೀಪಿಕೆ, ಡಿ.ವಿ.ಕೆ. ಮೂರ್ತಿ ಪ್ರಕಾಶನ, ಮೈಸೂರು.

೮. ಡಾ. ಸುಮಿತ್ರಾಬಾಯಿ.ಬಿ.ಎನ್. ೨೦೦೬, ಸ್ತ್ರೀವಾದ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೯. ಸಿದ್ಧಲಿಂಗಯ್ಯ.ಜಿ.ಎಸ್. ಕೃಷ್ಣಯ್ಯ ಎಂ.ಎಚ್ (ಸಂ): ಸಾಲುದೀಪಗಳು, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೧೦. ರಾಮಚಂದ್ರನ್ ಸಿ.ಎನ್. ೨೦೦೭, ಸಾಹಿತ್ಯ ವಿಮರ್ಶೆ, ಕರ್ನಾಟಕಸಾಹಿತ್ಯ, ಅಕಾಡೆಮಿ, ಬೆಂಗಳೂರು.

೧೧. ವಿಜಯಾದಬ್ಬೆ, ೧೯೯೭, ನಾರಿ:ದಾರಿ-ದಿಗಂತ, ರಚನಾ ಪ್ರಕಾಶನ, ಮೈಸೂರು.

೧೨. ಸಾ.ರಾ.ಅಬೂಬಕರ್, ೨೦೦೭, ಸಾಹಿತ್ಯ, ಸಂಸ್ಕೃತಿ ಮತ್ತು ಮಹಿಳೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ.

೧೩. ಡಾ.ಸಬೀಹಾ ಭೂಮಿಗೌಡ, ಡಾ.ಮಲ್ಲಿಕಾ ಘಂಟಿ (ಸಂ), ೨೦೦೬, ಕನ್ನಡ ಸಾಹಿತ್ಯ ಮತ್ತು ಮಹಿಳೆ ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೧೪. ಡಾ. ಹಳ್ಳಿಕೇರಿ ಎಫ್.ಟಿ, ಡಾ.ರವೀಂದ್ರನಾಥ್, ಕೆ. (ಸಂ), ೨೦೦೨, ದಶಕದ ಕನ್ನಡ ಸಾಹಿತ್ಯ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ,

೧೫. ವಿಜಯಾದಬ್ಬೆ, ೧೯೮೯, ಮಹಿಳೆ ಸಾಹಿತ್ಯ ಸಮಾಜ ರಚನಾ ಪ್ರಕಾಶನ, ಮೈಸೂರು.

೧೬. ಬರಗೂರು ರಾಮಚಮದ್ರಪ್ಪ(ಸಂ) ೨೦೦೬, ಕನ್ನಡ ಸಾಹಿತ್ಯ ಮತ್ತು ಸ್ತ್ರೀವಾದಿ ಚಿಂತನೆ. ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರೂ.

೧೭. ಅನುಪಮಾ ನಿರಂಜನ, ಶಿಶುವೈದ್ಯ ದೀಪಿಕೆ, ಡಿ.ವಿ.ಕೆ. ಮೂರ್ತಿ ಪ್ರಕಾಶನ, ಮೈಸೂರು.

೧೮. ಡಾ.ಸಬಿಹಾ ಭೂಮಿಗೌಡ (ಸಂ), ೨೦೦೬, ಮಹಿಳಾ ಸಾಹಿತ್ಯ, ಕರ್ನಾಟಕ ಸಾಹಿತ್ಯ, ಅಕಾಡೆಮಿ, ಬೆಂಗಳೂರು.

*****